# ತಿಂಮ ರಸಾಯನ

ಸಚಿತ್ರ - ವಿಚಿತ್ರ

## THIMMICTIONARY



ಕರ್ತೃ
ಬೀChi






ರಾಜೇಶ್ವರಿ ಪ್ರಕಾಶನ
೧ 'ಇ' ಮೈನ್, ಅನಂತನಿಲಯ
ಬನಶಂಕರಿ ೩ನೇ ಘಟ್ಟ, ಬೆಂಗಳೂರು - ೫೬೦ ೦೮೫

ರಾಜೇಶ್ವರಿ ಪ್ರಕಾಶನ
ಪ್ರಕಟನೆ - ೨

ಮೊದಲ ಮುದ್ರಣ ಜನವರಿ ೧೯೬೦
ಸುದರ್ಶನ ಪ್ರಕಾಶನ - ತಿಪಟೂರು ಇವರಿಂದ
ದ್ವಿತೀಯ ಮುದ್ರಣ - ೧೯೯೭



ಮುಖಚಿತ್ರ - ಶಶಿಧರ್ ಕುಮಾರ್

ಒಳಗಿನ ಚಿತ್ರಗಳು ಕೊಂಡಾಚಾರಿ, ಬಳ್ಳಾರಿ

ಪ್ರಕಾಶಕರು : ಶಕುಂತಲ ನಾಗರಾಜ್

ಮುದ್ರಕರು : ಬಾಲಾಜಿ ಆಫ್ ಸೆಟ್ ಪ್ರಿಂಟರ್ಸ್
ಬನಶಂಕರಿ ೩ನೇ ಹಂತ, ಬೆಂ - ೮೫ ದೂರವಾಣಿ : ೬೬೯೨೯೫೪

ಡಿಟಿಪಿ : ಪ್ರಿಂಟ್ ಮೀಡಿಯಾ
ಚಾಮರಾಜಪೇಟೆ, ಬೆಂ - ೧೮ ದೂರವಾಣಿ : ೬೬೧೮೮೫೨

**ಬೆಲೆ : ರೂ ೭೫-೦೦ (ರೂ - ಎಪ್ಪತ್ತೈದು ಮಾತ್ರ)**

ವಿತರಕರು : ತಾ.ರಾ.ನಾಗರಾಜ್
ಬನಶಂಕರಿ ೩ನೇ ಘಟ್ಟ, ಬೆಂಗಳೂರು - ೫೬೦ ೦೮೫

**THIMMA RASAAYANA** by **BEECHI**
*(Author of famous THIMMANA TALAE)*
Book also known as THIMMICTIONARY
Published by : **RAJESHWARI PRAKASHANA**
I - E Main, 3rd Stage, Banashankari, Bangalore-560 085
Books Distributed by : TARA NAGARAJ,
Bangalore-560 085

# ಮುನ್ನುಡಿ

ಗ್ರಂಥದ ಆರಂಭದಲ್ಲಿ ಮುನ್ನುಡಿಯ ರೂಪವಾಗಿ ಎರಡು ಮಾತು ಆಡುವುದು ಇಲ್ಲವೇ ಆಡಿಸುವುದು ಸಂಪ್ರದಾಯ.

"ಸಂಪ್ರದಾಯ ! ಯಾವ ಸಂಪ್ರದಾಯದ ದುರ್ವಾಸನೆಯೂ ಸನಿಯ ಸುಳಿಯದಂತಹ ಈ ಪುಸ್ತಕಕ್ಕೂ ಸಂಪ್ರದಾಯದ ಮೋಹವೇ ?'

ಮೋಹವೇನೂ ಇಲ್ಲ, ಇದು ಇಲ್ಲದಲ್ಲಿ ತಿಂಮನಿಗೆ ದ್ರೋಹವಾಗುತ್ತದೇನೋ ಎನ್ನುವ ಅನುಮಾನ, ಅಷ್ಟೆ.ಅಷ್ಟಕ್ಕಾಗಿಯೇ ಇಷ್ಟು ಮಾತು.

ಇದರ ರೂಪು ನಿಘಂಟು, ಜಾತಿ ನಿಘಂಟಲ್ಲ - ನಿಘಂಟು ಮಾಡಬೇಕಾದ ಕೆಲಸ ಮಾಡುತ್ತಿಲ್ಲ ಅಷ್ಟೇ ಅಲ್ಲ, ಅದು ಮಾಡಲಾರದ ಮತ್ತು ಮಾಡಬಾರದ ಕೆಲಸವನ್ನೂ ಇದು ಮಾಡುತ್ತದೆ. ಕತೆ, ಕಾದಂಬರಿ, ನಾಟಕ ಅಥವಾ ಬೇರಿನ್ನೇನಾದರೂ ಆಗಲು ಆಕಾರ ಮಾತ್ರವೇ ಅಲ್ಲ, ಆಚಾರವೂ ಅಡ್ಡಬರುತ್ತದೆ. ಒಂದೇ ವಿಷಯ ಅಥವಾ ಸನ್ನಿಹಿತ ವಿಷಯಗಳು ಇದರ ಸಾಮಗ್ರಿಯಲ್ಲ. ಆಡು ಮೇದಂತೆ ಕಾಡನ್ನೆಲ್ಲ ಬಾಯಾಡಿದೆ. ಕಣಿವೆಯ ಆಳದ ಒಳಗೂ ಇಳಿದಿದೆ. ಬೆಟ್ಟದ ತುಟ್ಟ ತುದಿಯನ್ನು ಮುಟ್ಟಿದೆ. ಆನೆಗೆ ಆಗದ ಕೆಲಸವನ್ನು ಆಡು ಆಡಾಡುತ್ತಾ ಮಾಡುತ್ತದೆ. ತಕ್ಷಣವೇ ಕೊಲ್ಲುವ ವಿಷದ ಎಲೆಯೊಂದಿಗೆ, ಮರುಕ್ಷಣವೇ ಬದುಕಿಸುವ ಸಂಜೀವಿನಿಯೂ ಈ 'ರಸಾಯನ' ದ ಹೊಟ್ಟೆಗೆ ಸೇರಿ ಸರ್ವಸಮಪಾಕವಾಗಿದೆ.

'ಗಾದೆ ಮಾತು ' ಎಂಬ ಸಪ್ಪೆ ಸಂಪನ್ನ ಹೆಸರಿನಿಂದ ಕರೆಯಬಹುದಿತ್ತು ಇದನ್ನು. ಆದರೆ ಗಾದೆಗಿಂತಲೂ ತಗಾದೆಯೂ ಹೆಚ್ಚಿದೆ ಇದರಲ್ಲಿ. 'ನುಡಿಕಟ್ಟು' ಎನ್ನಲು ಕಟ್ಟು ಸಂಪೂರ್ಣವಾಗಿ ಸಡಿಲಿದೆ. ಇದರಲ್ಲಿ ಏನೇನಿದೆ ಎಂಬುದನ್ನು ಹೇಳುವುದಕ್ಕಿಂತಲೂ ಏನಿಲ್ಲ ಎಂಬುದನ್ನು ಹೇಳುವುದು ಹೆಚ್ಚು ಸುಲಭವೇನೋ ? ಆದರೂ ಕೊಂಚ ಕಷ್ಟದ ಕೆಲಸವೇ ಕೊನೆಗೆ ಹೆಚ್ಚು ಸುಖಕರ. ಹೇರಳವಾಗಿ ಮುಚ್ಚು ಮಾತು ಇವೆ. ಇವು ಬುಚ್ಚು ಮಾತೂ ಅಹುದು. ಅಂತೆಯೇ ಬಿಚ್ಚುಮಾತೂ ಇವೆ. ಏಟುಮಾತಿಗೆ

ಅಡಿಟಣೆ ಇಲ್ಲ. ತಿರುಗುಬಾಣಕ್ಕೂ ಕೊರತೆ ಇಲ್ಲ. ಮಾತುಗಳಲ್ಲಿ ತತ್ತ್ವವಿದೆ, ತಥ್ಯವಿದೆ, ಹುಡುಗುತನವೂ ಇದೆ ಹಿರಿತನದ ಅನುಭವೋಕ್ತಿ ಇದೆ. ಅಲ್ಲಲ್ಲಿ ಒಗಟು ಮಾತಿವೆ - ಒರಟು ಮಾತೂ ಇದೆ. ಬಾಳಿನ ತಿರುಳನ್ನು ಅಳಿದ ತಪಸ್ವಿಗಳಿತ್ತ ಕಳಿತ ಫಲವಿದೆ, ಅಪಕ್ವತೆಯ ಒಗರೂ ಇದೆ. ಬರೀ ಹುಳಿಯೂ ಇಲ್ಲದಿಲ್ಲ. ಒಂದೊಂದೆಡೆ ಮಡುಕೂ ಮಾತಿನಲ್ಲಿ ವೇದದ ಸತ್ಯವೂ ಅಡಕವಾಗಿದೆ - ಇನ್ನೊಂದೆಡೆ ತಮಾಷೆಯಾಗಿ ಅಣಕವೂ ಆಗಿದೆ. ವ್ಯಂಗ್ಯದಲ್ಲಿ ಮಾನವ ಧರ್ಮದ ಮಥಿತಾರ್ಥ ಬಂದಿದೆ, ಬಾಳಿನ ಗುಟ್ಟು ಬಾಣದಂತೆ ಹಿಡಿದಿದೆ, ನಿತ್ಯದ ಸತ್ಯವು ಕೋಳಿಯಂತೆ ಕೂಗಿದೆ, ಮಲಗಿದವರನ್ನು ಎಬ್ಬಿಸಲು. ಒಟ್ಟಾರೆ ರಸಾಯನವಾಗಿದೆಯೆಂದು ಹೇಳದೆ ಗತ್ಯಂತರವಿಲ್ಲ. ಸಹೃದಯಿಗಳು ನೋಡಿದಂತೆ ಕಾಣುವುದಷ್ಟೆ ಇದರ ಗುರಿ - ಬೇರೊಂದಿಲ್ಲ.

ಇಷ್ಟೆಲ್ಲ ಕಹಿ-ಸಿಹಿ, ಹಸಿ-ಬಿಸಿ ಮಾತುಗಳಲ್ಲಿ ಕಾಮನಬಿಲ್ಲಿನ ಬಣ್ಣ ಬಣ್ಣಗಳಿವೆ - ಕಾಮಿನಿಗಣ್ಣಿನ ಬಣ್ಣವೂ ಒಂದು. ಇವುಗಳಲ್ಲಿ ಕ್ರೂರ ಸತ್ಯವೂ ಇದೆ. - ಅಕ್ರೂರ ಅಸತ್ಯವೂ ದೊರೆತೀತು, ಅಗಿದು ನೋಡಿದಾಗ. ಇದರಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳೆಲ್ಲವೂ ನನ್ನವೇನು ? ನಾನು ಅನುಮೋದಿಸುವುದೇನು ?ಅವೂ ಇವೆ, ಆದರೆ ಎಲ್ಲವೂ ನನ್ನವಲ್ಲ, ನಾನು ಒಪ್ಪುವವೂ ಅಲ್ಲ. "I love to lose myself in other men's minds" ಎಂಬ ಲ್ಯಾಂಬ್ ಕವಿಯ ಮಾತು ಇಲ್ಲಿ ಸಂಪೂರ್ಣತೆಯನ್ನು ಪಡೆದಿದೆ. 'ಜಗತ್ತಿನಲ್ಲಿ ಎರಡೇ ಅಭಿಪ್ರಾಯಗಳು - ನನ್ನದೊಂದು, ಮೂರ್ಖರ ದಿನ್ನೊಂದು ' ಎನ್ನುವ ಮೂರ್ಖರಲ್ಲಿ ನಾನೊಬ್ಬನಲ್ಲವಲ್ಲ ? ನನ್ನವು, ನಿನ್ನವು ಎಂಬ ಪ್ರಶ್ನೆ ಈಗ ಮುಖ್ಯವಲ್ಲ, ಜಗತ್ತಿನವು, ಅಷ್ಟೆ. ಲೋಕಕ್ಕೆ ಲಕ್ಷ ಕಣ್ಣು, ಕಣ್ಣಿಗೆ ದೃಷ್ಟಿ ಒಂದೇ ಅಲ್ಲ. ಕಂಡವರು ಕಂಡಂತೆ ಆಡಿದ್ದಾರೆ - ಕಾಣದವರೂ ಕಂಡವರಪ್ಪನಂತೆ ಆಡುತ್ತಾರೆ. ನಡೆದುದೆಲ್ಲವೂ ಪಥವಲ್ಲ. ಆಡಿದುದೆಲ್ಲವೂ ಸತ್ಯವಲ್ಲ-ನಿತ್ಯವೂ ಅಲ್ಲ. Not every opinion is truth ಎಂಬಂತೆ ಟೆರೆನ್ಸ ಕವಿ ನುಡಿದ ಮಾರ್ಮಿಕವಾದ ಮಾತನ್ನು ಇಲ್ಲಿ ಉದ್ಧರಿಸಬಹುದು.

As many men, so many minds, every one his own way.

ಜನವು ಹೇಗೋ, ಮನವೂ ಹಾಗೇ, ತುಳಿದವನದೇ ತನ್ನ ಹಾದಿ.

'ಸ್ತ್ರೀಬುದ್ಧಿಃ ಪ್ರಳಯಾಂತಕಃ' ಎನ್ನುವವರಿಲ್ಲವೆ, ಬುದ್ಧಿಗೆ ಲಿಂಗವಿಲ್ಲವೆಂದು ತಿಳಿದ ಮೇಲೂ ? 'ಹೆಣ್ಣನ್ನು ಬೈಯುವವನು ನೂರು ಬಾರಿ ಹುಟ್ಟುತ್ತಾನೆ - ನೂರೊಂದು ಬಾರಿ ಸಾಯುತ್ತಾನೆ' ಎನ್ನುವವರೂ ಇದ್ದಾರೆ, ಹೆಣ್ಣಿನಿಂದ ಮಣ್ಣು ತಿಂದ ಮೇಲೂ, ಅವರವರ ಅನುಭವ ಅದು, ಅವರವರ ಅಭಿಪ್ರಾಯ ಅವರವರದು. ಅನುಭವವೇನೋ ಸರಿಯಾಗಲಿ, ಅದರಿಂದ ಕಲಿತ ಪಾಠವು ಸರಿಯಿಲ್ಲ ಎನ್ನುವುದೂ ಒಂದು ವಾದ.. ಸರಿ ಅಹುದು, ಅಲ್ಲ ಎನ್ನುವುದಕ್ಕೆ ಸಾಧನ ? ನಮ್ಮ ತೂಕದ ಕಲ್ಲೆ ತಾನೆ ? ಅದು ಸರಿಯಾಗಿದೆಯೇ ? ಬಲ್ಲವರಾರು ? ಹೀಗಿರುವಾಗ ಇತರರ ಅಭಿಪ್ರಾಯಗಳನ್ನು, ಅವು ನನಗೆ ಸೇರುವುದಿಲ್ಲವೆಂಬ ಒಂದೇ ಕಾರಣದಿಂದ ನಿರಾಕರಿಸುವ ತಪ್ಪು ಹಾದಿಯನ್ನು ನಾನು ನಿದ್ರಿಸುವಾಗಲೂ ತುಳಿಯಲಾರೆ, ತಿಳಿಯಲಾರೆ. ಅನೇಕರ ಅಭಿಪ್ರಾಯಗಳು ಸಂಗ್ರಹಿತವಾಗಿರುವವ ಕಾರಣ ಒಂದಕ್ಕೊಂದು ತದ್ವಿರುದ್ಧವಾಗಿ ಅಲ್ಲಲ್ಲಿ ಡಿಕ್ಕಿ ಹೊಡೆಯುತ್ತಲಿವೆ. ಓದುವಾಗ ಯಾರಾರು ಯಾವಾವಾಗ ಭುಜ ಮುಟ್ಟಿಗೊಳ್ಳಬೇಕಾಗುತ್ತದೋ ಬಲ್ಲವರಾರು ? ನನ್ನ ವಿನಂತಿ ಇಷ್ಟೆ. ಅನ್ವಯಿಸದಿರುವಲ್ಲಿ ನಕ್ಕು ಬಿಡಬೇಕು - ಅನ್ವಯಿಸಿದಲ್ಲಿ ನಕ್ಕು ಹಿಡಿಯಬೇಕು. ತಿದ್ದಿಕೊಳ್ಳಿ ಎಂದು ತಿಳಿದವರಿಗೆ ತಿಳುವಳಿಕೆ ಹೇಳುವುದು ಅಧಿಕ ಪ್ರಸಂಗ - ತಿಳಿಯದವರಿಗೆ ಹೇಳುವುದು ವೃಥಾಶ್ರಮ. ಕವಿವರ್ಯ ಹೆನ್ರಿ ಫೀಲ್ಡಿಂಗ್ ಹೇಳಿದಂತೆ

I blame not men, but manners
Not an individual, but a species.

ಬಡತನವನ್ನು ಬೈದರೆ ಬಡವನೇಕೆ ಕಣ್ಣು ಕೆಂಪು ಮಾಡಿಕೋಬೇಕು ? ಕಳ್ಳತನ ಒಳ್ಳೆಯದಲ್ಲ - ಕಳ್ಳ ಒಳ್ಳೆಯವನೇ, ಕಳ್ಳತನ ಬಿಟ್ಟರೆ ; ಆಗ ಕಳ್ಳ ಕಳ್ಳನೇ ಅಲ್ಲವಲ್ಲ ? 'ತನ' ಗಳ ಮೇಲೆ ಟೀಕೆ, 'ತನ್ನ' ಮೇಲಲ್ಲ ಎಂದಾಗ ಯಾರಾದರೂ ಹೋಗಲಿಬಿಡು ಎಂದು ಕಾಲು ಚಾಚಬಹುದು. ಇನ್ನೊಂದು ಮಾತು. ಅಗಸ ಬಟ್ಟೆಯನ್ನೆತ್ತೆತ್ತಿ ಬಂಡೆಯ ಮೇಲೆ ಹೊಡೆಯುತ್ತಾನೆ - ಬಟ್ಟೆ ಹರಿಯಲೆಂದೂ ಅಲ್ಲ, ಬಂಡೆ ಒಡೆಯಲೆಂದು ಅಲ್ಲ. ಅವನು ಬಟ್ಟೆಯಲ್ಲಿಯ ಕೊಳೆಯನ್ನು ದ್ವೇಷಿಸುವುದಿಲ್ಲ - ಬಟ್ಟೆ ಸ್ವಚ್ಛವಾಗಲೆಂದಷ್ಟೆ ಇಚ್ಛಿಸುತ್ತಾನೆ. ಇದೂ ತಪ್ಪೇ ? ಬಟ್ಟೆಯ ಪೆಟ್ಟಿಗೇ ಬಂಡೆ ತುಂಡಾಗುವುದಾದರೆ

ಆ ಬಂಡೆ ಬಂಡೆಯೇ ? ಬಟ್ಟೆಯೇ ಹರಿದರೆ, 'ಎಂದಿಗಾದರೂ ಹರಿದುಹೋಗುವ ಬಟ್ಟೆ ಹೋದರೆ ಹೋಗಲಿ' ಎಂಬುದೊಂದೇ ಆಡಬೇಕಾದ ಮಾತು. ಬಾಳಿನ ಕೊಳೆ ತೊಳೆದು ಹುಲುಸು ಮಾಡಲು ತಿಂಮ ಕೈತೊಳೆದು ಕುಳಿತಿದ್ದಾನೆ. ಮೈ ತಳೆದು ನಿಂತಿದ್ದಾನೆ.

ಆಯಿತು, ಇದೆಲ್ಲವೂ ದೊರೆತುದು ಯಾವ ಕಣಜದಿಂದ ? ಕೊನೆಯಲ್ಲಿ ಕೊಟ್ಟಿರುವ ಪಟ್ಟಿಯಲ್ಲಿಯ ಪುಸ್ತಕಗಳಿಂದ ಎನ್ನಬಹುದೇ ? ಒಂದು ರೀತಿಯಲ್ಲಿ ಅವೂ ಸಹಾಯಕವಾಗಿದೆ. 'ವಕೀಲನು ತಪ್ಪದೆ ಸತ್ಯವನ್ನರಿತು ಕೊಳ್ಳುತ್ತಾನೆ - ಸಾಧ್ಯವಾದಷ್ಟು ಅದರಿಂದ ದೂರವಿರಲು' ಎಂಬಂತೆ ಇಲ್ಲಿಯೂ ಆಗಿದೆ. ಈ ಗ್ರಂಥಗಳಲ್ಲಿ ದೊರೆತ ಮಾತುಗಳು ಸಮೃದ್ಧಿಯಾಗಿ ಸಾಮಗ್ರಿ ಆಗಿವೆ. ಅವನ್ನು ಜಗ್ಗಾಡಿ, ಎಳೆದಾಡಿ, ನೂಕುನುಗ್ಗಲು ಮಾಡಿ, ಹೊಟ್ಟೆಯ ಕಡೆ ಬೆನ್ನು ಬರುವಂತೆ ಮಾಡಿದ್ದೇನೆ. ಹಲಕೆಲವು ಇದ್ದಂತೆಯೇ ಬಂದಿದ್ದರೂ ಆಶ್ಚರ್ಯವಲ್ಲ. ಈ ರಸಾಯನಕ್ಕೆ ಉಗ್ರಾಣವನ್ನೊದಗಿಸಿದವು ಕೇವಲ ಈ ಗ್ರಂಥಗಳೇ ಅಲ್ಲ - ಇನ್ನೊಂದು ಅತಿ ಮುಖ್ಯವಾದುದಿದೆ, ಇಪ್ಪತ್ತನೆಯದು - ಅತ್ಯದ್ಭುತವಾದ ಮಹಾಗ್ರಂಥ, ಜೀವನ ! ಆ ಗ್ರಂಥದ ಸೃಷ್ಟಿಕರ್ತನಾದ ಸರ್ವೇಶ್ವರನು ಕೊಡುವಷ್ಟು ಸಾಮಗ್ರಿಯಲ್ಲಿ ನನ್ನ ಈ ಬಡ ಮುಷ್ಟಿ ಹಿಡಿಯುವುದಾದರೂ ಎಷ್ಟು ?

ಈ ರಸಾಯನದ ಅನುಪಾನಕ್ಕೂ ಒಂದು ಕ್ರಮವಿದೆ ಎಂಬುದನ್ನು ಇಲ್ಲಿ ಹೇಳದಿದ್ದರೆ ತಿಂಮನಿಗೆ ದ್ರೋಹ ಬಗೆದಂತಾಗುವ ಅಪಾಯವಿದೆ. 'ಅ'ದಿಂದ ಹಿಡಿದು 'ಕ್ಷ' ದವರೆವಿಗೂ ದುಡುದುಡು ಓಡುತ್ತ ಓದಿದರೆ ಗಂಟೆಯೊಳಗಾಗಿ ಮುಗಿದೇ ಹೋಗುತ್ತದೆ. ಹಾಗೆ ಪಠಿಸಲು ಇದೇನು ಅರ್ಥವಾಗಬಾರದ ಶ್ರಾದ್ಧಮಂತ್ರವೇ ? ಹಲ್ಲಿಲ್ಲದವರು ಕಬ್ಬಿನ ತುಂಡನ್ನು ಹಾಗೊಮ್ಮೆ ಹೀಗೊಮ್ಮೆ ಬಾಯಲ್ಲಿ ಹೊರಳಿಸಿ ಉಗಿದರೆ ಕಬ್ಬಿನ ತಪ್ಪೇ ? ಹಲ್ಲಿನ ಗಾಣಕ್ಕೆ ಹಾಕಿ ಅಗಿದಂತೆಲ್ಲ ನಾಲಗೆಯ ಮೇಲೆ ರಸವು ಸುರಿಯುತ್ತದೆ. ಬಾಯಿ ತಾನೇ ಚಪ್ಪರಿಸುತ್ತದೆ ತನಗೆ ತಿಳಿಯದೆ, ಇದಾದರೂ ಹಾಗೆಯೇ. ಆಗೊಮ್ಮೆ, ಈಗೊಮ್ಮೆ, ಹಾಗಿಷ್ಟು, ಹೀಗಿಷ್ಟು, ನಿದ್ರೆ ದೂರವಿದ್ದಾಗ, ಊಟದ ನಂತರ, ಆಟದ ಮುಂಚೆ, ಗೆಳೆಯರ ಗುಂಪಿನಲ್ಲಿ, ಮನೆಯವಳ ಮುಂದೆ ಅಥವಾ ಹಿಂದೆ ಓದಿ ಓದಿ ಗುಟುಕುರಿಸಿಟ್ಟರೆ, ಮತ್ತಾವಾಗಲೋ ಇನ್ನೆಲ್ಲಿಯೋ ಯಾವುದೋ ತುಣುಕು ಸ್ಮರಣೆಗೆ ಬಂದು

ನಗು ಮುಸಿಮುಸಿಯುತ್ತದೆ. ರಸಾಯನವು ಅನ್ನವಲ್ಲ, ಔಷಧಿಯೂ ಅಲ್ಲ, ಮನಸಿಗೊಂದು ಟಾನಿಕ್.

ಇದೇನು ? ಅಕ್ಕಿಯಲ್ಲಿ ಬೇಳೆ ಸೇರಿದಂತೆ ಅಲ್ಲಿಲ್ಲ. ಕನ್ನಡ ತುಂಬ ಇಂಗ್ಲೀಷು ಕಾಳುಗಳಿವೆಯಲ್ಲ ಎಂದು ಕೇಳಬಹುದು. 'ಅಹುದು' ಎಂಬುದಷ್ಟೆ ನನ್ನ ಉತ್ತರ. ಬೇಡವೆಂದರೂ ಬರುತ್ತವೆ - ಮಕ್ಕಳು ಬರುವುದಿಲ್ಲವೇ ಭೂಲೋಕಕ್ಕೆ ! ಇಂಗ್ಲೀಷ್ ಭಾಷೆಯ ಸೌರಭ ಇದರಲ್ಲಿ ಬೇಕಾದವರಿಗೆ ಬೇಕಾದಷ್ಟಿದೆ - ಬೇಡಾದವರಿಗೆ ಬೇಡಾದಷ್ಟಿದೆ.

ಮೊಟ್ಟಮೊದಲ ವಿಷಯವನ್ನು ಕಟ್ಟಕಡೆಗೆ ಇಟ್ಟುಕೊಂಡಿದ್ದೇನೆ. ಈ ಗ್ರಂಥದ ಹುಟ್ಟು. ಒಬ್ಬ ಕಿರಿಯುವಕರು - ಮೊನ್ನೆ ತಾನೇ ಅವರ ಅರವತ್ತೊಂದನೇ ಹುಟ್ಟುಹಬ್ಬವಾಯಿತು. - ಹುಬ್ಬಳ್ಳಿಯಲ್ಲಿದ್ದಾರೆ. ; ಶ್ರೀಯುತ ಕರ್ಬಿ ಅವರ ಹೆಸರು. ನನ್ನನ್ನು ಹುಡುಕುತ್ತಾ , ಇದ್ದಕ್ಕಿದ್ದಂತೆ ಹುಬ್ಬಳ್ಳಿಯಿಂದ ಬಳ್ಳಾರಿಗೆ ಬಂದು, ಇಂತಹ ಪುಸ್ತಕ ಕನ್ನಡದಲ್ಲಿ ಇಲ್ಲ ಎನ್ನುತ್ತ 'Comictionary' ನನ್ನ ಮೇಜಿನ ಮೇಲಿಟ್ಟರು.

"ನೀವು ಬರೆಯಿರಿ"
ಎಂದೆ ನಾನು.
"ಇದು ತಿಂಮನ ಕೆಲಸ"
ಎಂದು ಸುಡಿದು, ನಡೆದೇ ಬಿಟ್ಟರು.

ಆರು ವರ್ಷಗಳು ಸಂದವು ಇಂದಿಗೆ. ಆ ರಾತ್ರಿಯೇ ಆರಂಭಿಸಿ, ಈ ಹಗಲೇ ಇದನ್ನು ಮುಗಿಸಿದ್ದೇನೆ, ಕೇವಲ ಅರ್ಧ ಡಜನ್ ವರ್ಷಗಳ ಅವಧಿಯಲ್ಲಿಯೇ ! ಬರೆಯಲೇಬೇಕೆಂಬ ಹಟವಿಲ್ಲ, ಮುಗಿಸಲು ಆತುರವಿಲ್ಲ, ಕಾತರವಿಲ್ಲ. ಅವರಿವರೊಟ್ಟಿಗೆ ತವುಡು ಕುಟ್ಟುವಾಗ ಹಾರಿದ ಕಿಡಿ, ಮಕ್ಕಳೊಟ್ಟಿಗೆ ಆಡುವಾಗ ಹೊಳೆದ ಬೆಳಕು, ಮಡದಿಯ ಗಂಟುಮುಖ ಕಂಡು ಆಡಿದ ಏಟು ಮಾತು, ಮರಳಿ ಬಂದ ಗೀಟು ಮಾತು, ಹಿರಿಯರ ಮಾತಿನಲ್ಲಿ ತೂರಿಬಂದ ಅರುವಿನ ಮಾತು, ಸಿಹಿ ಬಾಳನ್ನು ಕಹಿಯೆಂದುಕೊಂಡಾಗ ಹೊರಟ ಹೆದ್ದ ಮಾತು, ದೇವಾನಾದಾಗ ತೋಚಿದ್ದು, ದೆವ್ವವಾದಾಗ ಗೀಚಿದ್ದು, ಕೇಳಿದ್ದು, ಕದ್ದದ್ದು, ಎಲ್ಲವೂ ಅನಾಯಾಸವಾಗಿ ಬಂದು ಇಲ್ಲಿ ಸೇರಿವೆ. ಮನಸ್ಸಿನ ಒಳಪದರು ಪದರುಗಳಲ್ಲಿದ್ದುದನ್ನೆಲ್ಲ, ಹೊರಗೆಳೆದು ಅಕ್ಷರಮಾಲೆಗೆ ಅನುಗುಣವಾಗಿ

ಆ ಬಂಡೆ ಬಂಡೆಯೇ ? ಬಟ್ಟೆಯೇ ಹರಿದರೆ, 'ಎಂದಿಗಾದರೂ ಹರಿದುಹೋಗುವ ಬಟ್ಟೆ ಹೋದರೆ ಹೋಗಲಿ' ಎಂಬುದೊಂದೇ ಆಡಬೇಕಾದ ಮಾತು. ಬಾಳಿನ ಕೊಳೆ ತೊಳೆದು ಹುಲುಸು ಮಾಡಲು ತಿಂಮ ಕೈತೊಳೆದು ಕುಳಿತಿದ್ದಾನೆ. ಮೈ ತಳೆದು ನಿಂತಿದ್ದಾನೆ.

ಆಯಿತು, ಇದೆಲ್ಲವೂ ದೊರೆತುದು ಯಾವ ಕಣಜದಿಂದ ? ಕೊನೆಯಲ್ಲಿ ಕೊಟ್ಟಿರುವ ಪಟ್ಟಿಯಲ್ಲಿಯ ಪುಸ್ತಕಗಳಿಂದ ಎನ್ನಬಹುದೇ ? ಒಂದು ರೀತಿಯಲ್ಲಿ ಅವೂ ಸಹಾಯಕವಾಗಿದೆ. 'ವಕೀಲನು ತಪ್ಪದೆ ಸತ್ಯವನ್ನರಿತು ಕೊಳ್ಳುತ್ತಾನೆ - ಸಾಧ್ಯವಾದಷ್ಟು ಅದರಿಂದ ದೂರವಿರಲು' ಎಂಬಂತೆ ಇಲ್ಲಿಯೂ ಆಗಿದೆ. ಈ ಗ್ರಂಥಗಳಲ್ಲಿ ದೊರೆತ ಮಾತುಗಳು ಸಮೃದ್ಧಿಯಾಗಿ ಸಾಮಗ್ರಿ ಆಗಿವೆ. ಅವನ್ನು ಜಗ್ಗಾಡಿ, ಎಳೆದಾಡಿ, ನೂಕುನುಗ್ಗಲು ಮಾಡಿ, ಹೊಟ್ಟೆಯ ಕಡೆ ಬೆನ್ನು ಬರುವಂತೆ ಮಾಡಿದ್ದೇನೆ. ಹಲಕೆಲವು ಇದ್ದಂತೆಯೇ ಬಂದಿದ್ದರೂ ಆಶ್ಚರ್ಯವಲ್ಲ. ಈ ರಸಾಯನಕ್ಕೆ ಉಗ್ರಾಣವನ್ನೊದಗಿಸಿದವು ಕೇವಲ ಈ ಗ್ರಂಥಗಳೇ ಅಲ್ಲ - ಇನ್ನೊಂದು ಅತಿ ಮುಖ್ಯವಾದುದಿದೆ, ಇಪ್ಪತ್ತನೆಯದು - ಅತ್ಯದ್ಭುತವಾದ ಮಹಾಗ್ರಂಥ, ಜೀವನ ! ಆ ಗ್ರಂಥದ ಸೃಷ್ಟಿಕರ್ತನಾದ ಸರ್ವೇಶ್ವರನು ಕೊಡುವಷ್ಟು ಸಾಮಗ್ರಿಯಲ್ಲಿ ನನ್ನ ಈ ಬಡ ಮುಷ್ಟಿ ಹಿಡಿಯುವುದಾದರೂ ಎಷ್ಟು ?

ಈ ರಸಾಯನದ ಅನುಪಾನಕ್ಕೂ ಒಂದು ಕ್ರಮವಿದೆ ಎಂಬುದನ್ನು ಇಲ್ಲಿ ಹೇಳದಿದ್ದರೆ ತಿಂಮನಿಗೆ ದ್ರೋಹ ಬಗೆದಂತಾಗುವ ಅಪಾಯವಿದೆ. 'ಅ'ದಿಂದ ಹಿಡಿದು 'ಕ್ಷ' ದವರೆವಿಗೂ ದುಡುದುಡು ಓಡುತ್ತ ಓದಿದರೆ ಗಂಟೆಯೊಳಗಾಗಿ ಮುಗಿದೇ ಹೋಗುತ್ತದೆ. ಹಾಗೆ ಪಠಿಸಲು ಇದೇನು ಅರ್ಥವಾಗಬಾರದ ಶ್ರಾದ್ಧಮಂತ್ರವೇ ? ಹಲ್ಲಿಲ್ಲದವರು ಕಬ್ಬಿನ ತುಂಡನ್ನು ಹಾಗೊಮ್ಮೆ ಹೀಗೊಮ್ಮೆ ಬಾಯಲ್ಲಿ ಹೊರಳಿಸಿ ಉಗಿದರೆ ಕಬ್ಬಿನ ತಪ್ಪೇ ? ಹಲ್ಲಿನ ಗಾಣಕ್ಕೆ ಹಾಕಿ ಅಗಿದಂತೆಲ್ಲ ನಾಲಗೆಯ ಮೇಲೆ ರಸವು ಸುರಿಯುತ್ತದೆ. ಬಾಯಿ ತಾನೇ ಚಪ್ಪರಿಸುತ್ತದೆ ತನಗೆ ತಿಳಿಯದೆ, ಇದಾದರೂ ಹಾಗೆಯೇ. ಆಗೊಮ್ಮೆ, ಈಗೊಮ್ಮೆ, ಹಾಗಿಷ್ಟು, ಹೀಗಿಷ್ಟು, ನಿದ್ರೆ ದೂರವಿದ್ದಾಗ, ಊಟದ ನಂತರ, ಆಟದ ಮುಂಚೆ, ಗೆಳೆಯರ ಗುಂಪಿನಲ್ಲಿ, ಮನೆಯವಳ ಮುಂದೆ ಅಥವಾ ಹಿಂದೆ ಓದಿ ಓದಿ ಗುಟುಕುರಿಸಿಟ್ಟರೆ, ಮತ್ತಾವಾಗಲೋ ಇನ್ನೆಲ್ಲಿಯೋ ಯಾವುದೋ ತುಣುಕು ಸ್ಮರಣೆಗೆ ಬಂದು

ನಗು ಮುಸಿಮುಸಿಯುತ್ತದೆ. ರಸಾಯನವು ಅನ್ನವಲ್ಲ, ಔಷಧಿಯೂ ಅಲ್ಲ, ಮನಸಿಗೊಂದು ಟಾನಿಕ್.

ಇದೇನು ? ಅಕ್ಕಿಯಲ್ಲಿ ಬೇಳೆ ಸೇರಿದಂತೆ ಅಲ್ಲಿಲ್ಲ. ಕನ್ನಡ ತುಂಬ ಇಂಗ್ಲೀಷು ಕಾಳುಗಳಿವೆಯಲ್ಲ ಎಂದು ಕೇಳಬಹುದು. 'ಅಹುದು' ಎಂಬುದಷ್ಟೆ ನನ್ನ ಉತ್ತರ. ಬೇಡವೆಂದರೂ ಬರುತ್ತವೆ - ಮಕ್ಕಳು ಬರುವುದಿಲ್ಲವೇ ಭೂಲೋಕಕ್ಕೆ ! ಇಂಗ್ಲೀಷ್ ಭಾಷೆಯ ಸೌರಭ ಇದರಲ್ಲಿ ಬೇಕಾದವರಿಗೆ ಬೇಕಾದಷ್ಟಿದೆ - ಬೇಡಾದವರಿಗೆ ಬೇಡಾದಷ್ಟಿದೆ.

ಮೊಟ್ಟಮೊದಲ ವಿಷಯವನ್ನು ಕಟ್ಟಕಡೆಗೆ ಇಟ್ಟುಕೊಂಡಿದ್ದೇನೆ. ಈ ಗ್ರಂಥದ ಹುಟ್ಟು. ಒಬ್ಬ ಕಿರಿಯುವಕರು - ಮೊನ್ನೆ ತಾನೇ ಅವರ ಅರವತ್ತೊಂದನೇ ಹುಟ್ಟುಹಬ್ಬವಾಯಿತು. - ಹುಬ್ಬಳ್ಳಿಯಲ್ಲಿದ್ದಾರೆ. ; ಶ್ರೀಯುತ ಕರ್ಬಿ ಅವರ ಹೆಸರು. ನನ್ನನ್ನು ಹುಡುಕುತ್ತಾ , ಇದ್ದಕ್ಕಿದ್ದಂತೆ ಹುಬ್ಬಳ್ಳಿಯಿಂದ ಬಳ್ಳಾರಿಗೆ ಬಂದು, ಇಂತಹ ಪುಸ್ತಕ ಕನ್ನಡದಲ್ಲಿ ಇಲ್ಲ ಎನ್ನುತ್ತ 'Comictionary' ನನ್ನ ಮೇಜಿನ ಮೇಲಿಟ್ಟರು.

"ನೀವು ಬರೆಯಿರಿ"
ಎಂದೆ ನಾನು.
"ಇದು ತಿಂಮನ ಕೆಲಸ"
ಎಂದು ನುಡಿದು, ನಡೆದೇ ಬಿಟ್ಟರು.

ಆರು ವರ್ಷಗಳು ಸಂದವು ಇಂದಿಗೆ. ಆ ರಾತ್ರಿಯೇ ಆರಂಭಿಸಿ, ಈ ಹಗಲೇ ಇದನ್ನು ಮುಗಿಸಿದ್ದೇನೆ, ಕೇವಲ ಅರ್ಧ ಡಜನ್ ವರ್ಷಗಳ ಅವಧಿಯಲ್ಲಿಯೇ ! ಬರೆಯಲೇಬೇಕೆಂಬ ಹಟವಿಲ್ಲ, ಮುಗಿಸಲು ಆತುರವಿಲ್ಲ, ಕಾತರವಿಲ್ಲ. ಅವರಿವರೊಟ್ಟಿಗೆ ತವುಡು ಕುಟ್ಟುವಾಗ ಹಾರಿದ ಕಿಡಿ, ಮಕ್ಕಳೊಟ್ಟಿಗೆ ಆಡುವಾಗ ಹೊಳೆದ ಬೆಳಕು, ಮಡದಿಯ ಗಂಟುಮುಖ ಕಂಡು ಆಡಿದ ಏಟು ಮಾತು, ಮರಳಿ ಬಂದ ಗೀಟು ಮಾತು, ಹಿರಿಯರ ಮಾತಿನಲ್ಲಿ ತೂರಿಬಂದ ಅರುವಿನ ಮಾತು, ಸಿಹಿ ಬಾಳನ್ನು ಕಹಿಯೆಂದುಕೊಂಡಾಗ ಹೊರಟ ಹೆಡ್ಡ ಮಾತು, ದೇವಾನಾದಾಗ ತೋಚಿದ್ದು, ದೆವ್ವವಾದಾಗ ಗೀಚಿದ್ದು, ಕೇಳಿದ್ದು, ಕದ್ದದ್ದು, ಎಲ್ಲವೂ ಅನಾಯಾಸವಾಗಿ ಬಂದು ಇಲ್ಲಿ ಸೇರಿವೆ. ಮನಸ್ಸಿನ ಒಳಪದರು ಪದರುಗಳಲ್ಲಿದ್ದುವನ್ನೆಲ್ಲ, ಹೊರಗೆಳೆದು ಅಕ್ಷರಮಾಲೆಗೆ ಅನುಗುಣವಾಗಿ

ಜೋಡಿಸಿ, 'ಕಾ'ಗುಣಿತಕ್ಕೆ ಹೊಂದಿಸಿ ಕಾಗದದ ಮೇಲೆ ಮೂಡಿಸಿದುದಷ್ಟೇ ನಾನು ಮಾಡಿದ ಮಹಾಕಾರ್ಯ. ಈ ಗ್ರಂಥರಚನೆ ನನಗೊಂದು ದೊಡ್ಡ ಕಷ್ಟದ ಕೆಲಸವಾಗಲಿಲ್ಲ - ಕೆಲಸವು ಬೇಡಾದಾಗ ಬೇಸರ ಕಳೆಯಲು ಆಡಿದ ಆಟವಾಯಿತು. ಆರು ವರ್ಷಗಳ ಶ್ರಮರಹಿತ ಕ್ರೀಡೆಯ ಸುಲಭ ಫಲವೇ ಈ 'ತಿಂಮ ರಸಾಯನ'. ಇಷ್ಟೆಲ್ಲ ಒಪ್ಪಿಗೊಂಡ ಮೇಲೆ, ಸಹಸ್ರಾರು ಶಬ್ದಗಳಿಗೆ (ಇದರಲ್ಲಿ ಸಾವಿರದ ಆರೇ ಶಬ್ದಗಳಿವೆ) ಅನರ್ಥ ಅಪಾರ್ಥಗಳನ್ನು ಮಾಡಿ, ಅಡ್ಡಾದಿಡ್ಡಿ ಎಳೆದಾಡಿ, ಸಿಕ್ಕಾಪಟ್ಟೆ ಕಿತ್ತಾಡಿ, ಜಗ್ಗಾಡಿ, ಜಗಿದಾಡಿ, ಕೋತಿಯಾಟ ಆಡುವ ಈ ಅದ್ಭುತ ಭೀಮಬಲ, ಅಥವಾ ಕೀಚಕ ಶಕ್ತಿ, ಇಲ್ಲವೇ ತಿಂಮಯುಕ್ತಿ ಬೀಚಿಯಾದ ನನಗಲ್ಲದೆ ಮತ್ತಾರಿಗಿವೆ ಎಂದು ಬೆನ್ನು ಚಪ್ಪರಿಸಿಕೊಳ್ಳಲೇ, ಯಾರೂ ಇಲ್ಲದಾಗ ?

ಗತ್ತಿನಿಂದ ತಾಳ ಹಿಡಿಯುವವರಿದ್ದರೆ ಗಮ್ಮತ್ತಿನಿಂದ ಕುಣಿಯುವವರಿಗೂ ಕುಣಿಸಿ; ಕಾಲನೋವೂ ಕಾಣುವುದಿಲ್ಲ. ಕಿರಿಗೆಳೆಯ ಕಲಾವಿದ ಕೊಂಡಾಚಾರಿಯವರು ನನ್ನ ಕೈಗೆ ಸಿಕ್ಕಿರುವುದು, ನನಗೆ ಇನ್ನೊಂದು ಕೈ ದೊರೆತಂತಾಗಿದೆ. ನನ್ನ (ಖಾದೀಸೀರೆ) ಯ ರಕ್ಷಾಕವಚಕ್ಕೆ ಚಿತ್ರವನ್ನು ಬರೆದು ಅನೇಕ ರಸಿಕರ ಮೆಚ್ಚುಗೆಗೆ ಪಾತ್ರರಾದ ಇವರು, ಈ ವಿಚಿತ್ರ 'ತಿಂಮ ರಸಾಯನ' ವನ್ನು ಸಚಿತ್ರವಾಗಿ ಮಾಡಿ ಉಪಕರಿಸಿದ್ದಾರೆ. ಮುಖಚಿತ್ರ ಶ್ರೀ ಎಸ್.ಎಲ್.ನಾರಾಯಣರದು. 'ತಿಂಮನ ತಲೆ'ಗೆ ಸಿಂಹನ ನೆರವು, ಇವಕ್ಕೆ ಇವರ ನೆರವು, ಎಲ್ಲವಕ್ಕೂ ಕನ್ನಡ ರಸಿಕ ಬೃಂದದ ನೆರವು. ಆರುವರ್ಷಗಳು ಗರ್ಭದಲ್ಲಿದ್ದು ವರ್ಧಮಾನವಾಗುತ್ತಿದ್ದ ಈ ಕೃತಿಯನ್ನು ಪ್ರಕಟಿಸಿ ಬೆಳಕಿಗೆ ತಂದ ತಿಪಟೂರಿನ ಸುದರ್ಶನ (ದಂಪತಿ) ಪ್ರಕಾಶಕರುಗಳಾದ ಶ್ರೀಮತಿ ಶಕುಂತಲಾ ನಾಗರಾಜ ಮತ್ತು ಶ್ರೀ ತಾ.ರಾ. ನಾಗರಾಜ ಇವರುಗಳಿಗೆ ನಾನು ಋಣಿ ಎಂದು ಹೇಳಿ, ಮುನ್ನುಡಿಯನ್ನು ಮುಗಿಸಲೆ ? ಮುದ್ದಾಗಿ ಮುದ್ರಿಸಿ ನನ್ನ ಕೃತಿಯ ಚೆಲುವಿಗೆ ಮೆರುಗನ್ನು ತಂದುಕೊಟ್ಟ ನನ್ನ ಹಳೆ ಗೆಳೆಯರಾದ ಶ್ರೀಯುತ ಈಸ್ಟನ್ ಪ್ರೆಸ್‌ನ ಎಂ.ಎಸ್.ಚಿಂತಾಮಣಿಯವರಿಗೆ ನನ್ನ ಉಪಕಾರ ಸ್ಮರಣೆ ಸಲ್ಲುತ್ತದೆ.

ಇತಿ
ಅನುಗಾಲವು ಎಲ್ಲರವ
ಬೀchi

ಬಳ್ಳಾರಿ
10.11.1959



ಅನರ್ಥಕ್ಕೆ ಆರಂಭ.

**ಅಕ್ಕ** ಅಕ್ಕನ ಬಳಗವಿದ್ದಲ್ಲಿ ಭಾವನ ಸಮಾಜವು ಹುಡುಕುತ್ತ ಬರುತ್ತದೆ - ಇವರ ಪೂರ್ಣ ಫಲವೇ ಶಿಶುವಿಹಾರ ?

**ಅಕಾಲಮೃತ್ಯು** ಪಿಂಚಿನ ತರುಣವನು ಅದೆಷ್ಟು ತಡವಾಗಿ ಸತ್ತರೂ ಅದು ಮಕ್ಕಳ ಪಾಲಿಗೆ ಅಕಾಲ ಮೃತ್ಯು, ಜೀವವಿಮೆ ಇಳಿಸಿದವನು ಮರುದಿನವೇ ಸತ್ತರೂ ಅದು ಮಡದಿಯ ಪಾಲಿಗೆ ಸಕಾಲಮೃತ್ಯು ; ಮಳೆ ಮೋಡವಿದ್ದಾಗ ಸಾಯುವುದು ಹೊರುವವರಿಗೆ ಅಕಾಲ ಮೃತ್ಯು ; ಚಿಕ್ಕ ಹೆಂಡತಿ, ಪುಟ್ಟ ಗಂಟು ಬಿಟ್ಟು ವೃದ್ಧಪತಿಯು ಸತ್ತರೆ ಅವಾರ ಪಾಲಿಗೋ ಸಕಾಲ ಮೃತ್ಯು, ಸಾಯದೇ ಉಳಿದರೆ ತನಗೇ ಅನುಗಾಲ ಮೃತ್ಯು.

**ಅಕ್ಕಿ** ಹಸಿದಾಗ ಹೊಟ್ಟೆಗೆ ಬೀಳಲಿ ಬಿಡಲಿ, ಮದುವೆಯ ದಿನ ತಲೆಗೆ, ಸತ್ತ ದಿನ ಬಾಯಿಗೆ ಬೀಳುವುದೇ ಇದರ ಕೆಲಸ.

**ಅಗಣಿತ** ಗಣಿತ ಬಾರದ ವಿದ್ಯಾರ್ಥಿ - ದೊಡ್ಡದರಲ್ಲಿ ಚಿಕ್ಕದನ್ನು ಕಳೆಯಬೇಕೆಂಬುದಷ್ಟೇ ಗೊತ್ತು.

**ಅಗಸ** ಒಬ್ಬರ ಬಟ್ಟೆ ಬಿಚ್ಚಿ, ಇನ್ನೊಬ್ಬರಬಂಡೆಯೊಡೆಯುತ್ತ ತನ್ನ ಹೊಟ್ಟೆ ತುಂಬಿಸುವವನು; ಅಗಸನಿಗೆ ದೇವನು ಆನಂದವನ್ನು ಕೊಡುತ್ತಾನೆ. ಕತ್ತೆ ಕಳೆಯುತ್ತದೆ, ನಂತರ ಸಿಗುತ್ತದೆ : ಅರಸನಿಗೂ ಅಷ್ಟೇ, ರಾಜ್ಯವು ಕೈಬಿಡುತ್ತದೆ, ನಂತರ ಸಿಗುತ್ತದೆ.

**ಅಗಳು** ಅನ್ನ, ಅರಿವೆ, ಅಕ್ಷರ ಎಂಬೀ ಮೂರು 'ಅ'ಗಳು ಪ್ರತಿಯೊಬ್ಬನಿಗೂ ಅವಶ್ಯಕ.

**ಅಗ್ನಿ** ಸುಡುತ್ತದೆ ಇಲ್ಲವೆ ಶುದ್ಧೀಕರಿಸುತ್ತದೆ - ಸಂಕಷ್ಟದಂತೆ

**ಅಚ್ಚಿನ ಮನೆ** ಸಾಹಿತಿಯನ್ನು ತಪ್ಪುಗಳಿಂದ ಸುಡುವ ಅರಗಿನ ಮನೆ.

**ಅಜ್ಜ** ಅಜ್ಜ ಹೊರ ಹೊರಡುವಾಗ ಬುತ್ತಿ ಹೊರುತ್ತಾನೆ ಮೊಮ್ಮಗ ಬೀಡಿ ಬೆಂಕಿಪೆಟ್ಟಿಗೆ ಹುಡುಕುತ್ತಾನೆ.

**ಅಜ್ಞಾನಿ** "ನಾನು ಅಜ್ಞಾನಿಗಳ ಮಾತನ್ನು ಕಿವಿಯಿಂದ ಕೇಳಲೂ ಸಿದ್ಧನಿಲ್ಲ, ನಡೆ ಹೊರಗೆ" ಎಂದು ಗುರುಗಳು ಅಪ್ಪಣೆ ಕೊಡಿಸಿದಾಗ ತಿಂಮ ವಿನಯದಿಂದ ವಿನಂತಿ ಮಾಡಿದ - "ನನಗೆ ಅಂತಹದೇನೂ ಹಠವಿಲ್ಲ, ಸ್ವಾಮಿ. ಎಂತಹ ಅಜ್ಞಾನಿಯ ಮಾತನ್ನಾದರೂ ಕೇಳಲು ನಾನು ಸರ್ವದಾ ಸಿದ್ಧನಿದ್ದೇನೆ. ಅದೇನು ಹೇಳಿ, ತಮ್ಮ ಮಾತನ್ನು."

**ಅರ್ಜುನ** ಅರ್ಜಿಯನ್ನು ಹಾಕಿ ಕುಳಿತಿರುವವನೇ ಅರ್ಜುನ

**ಅಡಚಣೆ** ಅಡಚಣೆ ಏನಾದರೂ ಮೂಡಿಸುತ್ತದೆ - ತನ್ನ ಕೈಹಿಡಿದ ಮಡದಿಯನ್ನೇ ಪ್ರಿತಿಸುವಂತೆ ಮಾಡುತ್ತದೆ !

**ಅಡಿಗಲ್ಲು** ಮದ್ಯಪಾನೀಯವು ಸ್ನೇಹಕ್ಕೆ ಅತ್ಯುತ್ತಮವಾದ ಅಡಿಗಲ್ಲು - ಆದರೆ ಈ ಅಡಿಗಲ್ಲಿನ ಮೇಲೆ ಯಾವ ಕಟ್ಟಡವೂ ನಿಂತಿಲ್ಲ.

**ಅಡಿಯಾಳು** ಒಂದೇ ಅಡಿ ಎತ್ತರವಿರುವ ಆಳು.

**ಅಡುಗೆ ಮನೆ** ಅನೇಕ ರೋಗಗಳ ತವರಮನೆ; ಅಡುಗೆ ಮನೆ ಇಲ್ಲದ ಮನೆ - ಅಗ್ಗಿಷ್ಟಿಕೆ ಇಲ್ಲದ ಅಕ್ಕಸಾಲಿಗ.

**ಅಡುಗೆಯವರು** ಮಾನವರಲ್ಲಿ ಮೂರು ಲಿಂಗಗಳು - ಪುರುಷರು, ಸ್ತ್ರೀಯರು ಮತ್ತು ಅಡುಗೆಯವರು

**ಅತಿ** ಅತಿಯಾಗುವವರೆಗೂ ಮತಿ ಬರುವದಿಲ್ಲ - ಮತಿ ಬರುವವರೆಗೂ ಮಿತಿ ಬರುವದಿಲ್ಲ ; ಸುಗುಣವು ಅತಿಯಾದರೆ ಅದಕ್ಕೇ ದುರ್ಗುಣದ ದುರ್ವಾಸನೆ ಬರುತ್ತದೆ ; ಅತಿಯಾಗಿ ಅಂಜುವವನಿಗೆ ಕುದುರೆ ಏಕೆ, ಛಬಕೂ ದೊರೆಯಲಾರದು - ಅತಿಯಾದ ಧೈರ್ಯಶಾಲಿ ಛಬಕನ್ನೇಕೆ, ಕುದುರೆಯನ್ನೂ ಕಳೆದು ಕೊಳ್ಳುತ್ತಾನೆ.

**ಅತಿಥಿ** ತಿಥಿ ವಾರಗಳ ನಿಯಮವಿಲ್ಲದೆ ಊಟಕ್ಕೆ ಬರುವವನು; ಅತಿಥಿಗಳು ಬರುತ್ತಾರೆ, ಹೋಗುತ್ತಾರೆ, ಇದೇ ದೊಡ್ಡ ಉಪಕಾರ - ಇದೇ ಎಂದರೆ ಯಾವುದು ? ಒಬ್ಬ ಅತಿಥಿ ಇನ್ನೊಬ್ಬ ಅತಿಥಿಯನ್ನು ಪ್ರೇಮಿಸುವುದಿಲ್ಲ - ಮನೆಯ ಯಜಮಾನ ಇವರೀರ್ವರನ್ನೂ ದ್ವೇಷಿಸುತ್ತಾನೆ ; ಅತಿಥಿ ಮೀನಿನ ಜಾತಿಯ ಮನುಷ್ಯ - ಮೂರುದಿನಗಳು ಮನೆಯಲ್ಲಿದ್ದರೆ ಸಾಕು, ದುರ್ವಾಸನೆ ತಪ್ಪದು.

**ಅತಿಮಾತಿನವ** ಹೆಂಡತಿಯ ಸಹೋದರ - ಉದಾ : ಅರ್ಜುನನ ಪಾಲಿಗೆ ಕೃಷ್ಣ ; ಎಲ್ಲ ಮಾತುಗಳನ್ನೂ ಆಡಬಲ್ಲ ಮಹಾನುಭಾವ - ಹೋಗಿ ಬರುತ್ತೇನೆ ಎಂಬುದೊಂದನ್ನು ಬಿಟ್ಟು ; ತನ್ನ ದನಿಗಾಗಿಯೆ ತನ್ನ ಕಿವಿಗಳನ್ನು ಮೀಸಲಾಗಿಟ್ಟುಕೊಂಡವ.

**ಅತಿಯಾಶೆ** ಕತ್ತೆ ಕೋಡುಬೇಡಲು ಹೋದರೆ ಇದ್ದ ಕಿವಿಯನ್ನೂ ಕತ್ತರಿಸಿದರಂತೆ.

**ಅತಿಶಯೋಕ್ತಿ** ತಾಯಿಯ ಹೆಸರನ್ನು ಹೇಳುವಾಗಲ್ಲ - ತಂದೆಯ ಹೆಸರನ್ನು ಹೇಳುವಾಗ ಅತಿಶಯೋಕ್ತಿ ಎನಿಸುತ್ತದೆ.

**ಅತೃಪ್ತಿ** ಅತೃಪ್ತಿಯಿಂದ ಕ್ರಾಂತಿ ಹುಟ್ಟುತ್ತದೆ, ಕ್ರಾಂತಿಯಿಂದ ಅತೃಪ್ತಿ ಬೆಳೆಯುತ್ತದೆ ; ಏಕಾಂತ ನೋಡಿರಿ.

**ಅತ್ತೆ** ನಾನು ಕನ್ಯೆಯಾಗಿದ್ದಾಗ ನನಗೆ ಒಳ್ಳೆಯ ಅತ್ತೆ ದೊರೆಯಲಿಲ್ಲ. ನಾನು ಅತ್ತೆಯಾಗಿದ್ದಾಗ ನನಗೆ ಒಳ್ಳೆಯ ಸೊಸೆ ದೊರೆಯಲಿಲ್ಲ ಎನ್ನುವವಳು ಒಳ್ಳೆಯ ಸೊಸೆಯೂ ಅಲ್ಲ, ಒಳ್ಳೆಯ ಅತ್ತೆಯೂ ಅಲ್ಲ.

**ಅರ್ಥ** ಹೆಂಡತಿ ಗಂಡನನ್ನು ಕಡಿಮೆ ಪ್ರೀತಿಸಬೇಕು, ಹೆಚ್ಚು ಅರ್ಥ ಮಾಡಿಕೊಳ್ಳಬೇಕು. ಗಂಡ ಹೆಂಡತಿಯನ್ನು ಹೆಚ್ಚು ಪ್ರೀತಿಸಬೇಕು. ಅರ್ಥ ಮಾಡಿಕೊಳ್ಳುವುದನ್ನು ಮರೆಯಬೇಕು.

**ಅರ್ಥಗರ್ಭಿತ** ಅರ್ಥಕ್ಕೆ (ಹಣಕ್ಕೆ) ಗರ್ಭಿಣಿಯಾದವಳು.

**ಅರ್ಥೇಚಾ** ಹಣ ಕೊಟ್ಟು ಕೊಂಡ ಚಹಾ ; ಕಾಯೇಚಾ, ಧರ್ಮೇಚಾ ನೋಡಿರಿ.

**ಅದೃಷ್ಟ** ಅದೃಷ್ಟ ಚೆನ್ನಾಗಿದ್ದವನ ಹುಂಜವೂ ಮೊಟ್ಟೆ ಇಡುತ್ತದೆ; ಅದೃಷ್ಟವು ಗೆಳೆಯರನ್ನು ತಂದು ಕೊಡುತ್ತದೆ. ದುರಾದೃಷ್ಟವು ಅವರ ಬೆಲೆ ಹೇಳುತ್ತದೆ.

**ಅದ್ವೈತ** ಎರಡಲ್ಲದುದು, ಮೂರು, ನಾಲ್ಕು, ಸಹಸ್ರ ಇತ್ಯಾದಿ ?

**ಅರ್ಧ** ಅವಿವೇಕಿಯ ಮಡದಿ ಅರ್ಧ ವಿಧವೆ ; ಸಂನ್ಯಾಸಿಯ ಹೆಂಡತಿಯು ಅರ್ಧ ಸೌಭಾಗ್ಯವತಿ.

**ಅಧ್ಯಕ್ಷ** ತನ್ನ ಭಾಷಣದಿಂದ ಇನ್ನೊಬ್ಬರ ಭಾಷಣವನ್ನು ಕೆಡಿಸುವ ಕೆಟ್ಟ ಪ್ರಾಣಿ.

**ಅಧಿಕಾರ** ಸದಾ ಅಲುಗಾಡುವ ಸಿಂಹಾಸನ ; ಅಧಿಕಾರವು ಎಲ್ಲರಿಗೂ ದೊರೆಯುವುದು ಹೇಗೆ ಸಾಧ್ಯ - ಅಧಿಕಾರ

ಹಿಡಿದವರಲ್ಲಿ ಸಾಯುವವರು ಸ್ವಲ್ಪೇ ಜನರು, ರಾಜೀನಾಮೆ ಕೊಡುವವರು ಇಲ್ಲವೇ ಇಲ್ಲ ; ನಾನು ಏನೆಂಬುದನ್ನು ತಿಳಿಯಲು ನನ್ನ ಭಾಷಣವನ್ನು ಕೇಳಬೇಡ - ನನಗೆ ಅಧಿಕಾರವನ್ನು ಕೊಟ್ಟು ನೋಡು, ನಂತರ ಕಸಿದುಕೊಂಡೂ ನೋಡು ; ಬೇಕಾದುದನ್ನು ಬೇಡುವ ಹಕ್ಕು ಭಕ್ತನದು, ಬೇಡಾದುದನ್ನು ಕೊಡುವ ಅಧಿಕಾರ ದೇವನದು ; ಆತ್ಮಕ್ಕೆ ಜಂಗು ಹಿಡಿಸುವ ಕೊಳೆಗೆ ಅಧಿಕಾರವೆಂದು ಹೆಸರು ; ಇಡೀ ಜಗತ್ತಿನಲ್ಲಿ ಇರುವವು ಎರಡೇ ವರ್ಗಗಳು - ಅಧಿಕಾರಕ್ಕೆ ಅಂಟಿಕೊಂಡಿರುವದೊಂದು, ಕಸಿದುಕೊಳ್ಳಬೇಕೆಂಬುದಿನ್ನೊಂದು ; ಅಧಿಕಾರವಿಲ್ಲದವರಿಗೆಲ್ಲ ಗೊತ್ತು - ಅಧಿಕಾರವನ್ನು ಹೇಗೆ ಉಪಯೋಗಿಸಬೇಕೆಂಬುದು ; ಅಧಿಕಾರ ತರುವ ಅನೇಕ ಸವಲತ್ತುಗಳಲ್ಲಿ ಅತಿ ಮುಖ್ಯವಾದುದೊಂದು, ತನಗಿಂತಲೂ ಉತ್ತಮರನ್ನು ಕೀಳಾಗಿ ನೋಡುವ ಸೌಲಭ್ಯ !

**ಅಧಿಕಾರ** ಆಳು ಅತಿ ಸುಲಭವಾಗಿ ಮಾಡಬಹುದಾದ ಕೆಲಸವನ್ನು ಅತಿ ಕಷ್ಟದಿಂದ ಮಾಡಿಸುವವನೇ ಅಧಿಕಾರಿ; ಅಧಿಕಾರಿ ಮುಟ್ಟಿದುದೆಲ್ಲ ಚಿನ್ನ ವಾಗುವುದಿಲ್ಲ - ಚಿನ್ನವಾಗುವದನ್ನಷ್ಟೇ ಮುಟ್ಟುತ್ತಾನೆ.

**ಅನ್ನ** ಏಳು ದೇವರ ಗಂಡ ; ಅನ್ನವಿಲ್ಲದವನು ಸಂಪನ್ನನಾದಾನೇ ? ಅನ್ನವಿದ್ದರೆ ಪರಮಾನ್ನವೂ ಬರುತ್ತದೆ ; ದೇವನು ಅಕ್ಕಿಯನ್ನು ಕೊಡುತ್ತಾನೆ. ದೆವ್ವವು ಅಡುಗೆಯವನನ್ನು ಕಬಳಿಸುತ್ತದೆ ; ಅನ್ನ ಬೇಡವವನನ್ನು ಯಾವನಾದರೂ ಮಗನಂತೆ ಜೋಪಾನ ಮಾಡಬಹುದು ; ಮಾನವರಲ್ಲಿ ಎರಡು

ಜಾತಿಗಳು - ಹೆಚ್ಚು ಅನ್ನ ಉಳ್ಳವರು, ಹೆಚ್ಚು ಹಸಿವು ಉಳ್ಳವರು.

**ಅನ್ಯಾಯ** ಅನ್ಯಾಯವು ಅನುಗಾಲವೂ ಆಳಲಾರದು - ನ್ಯಾಯವು ಆಗಾಗ್ಗೆ ಆಳುತ್ತದೆ ; ಅನ್ಯಾಯಕ್ಕೆ ಯಾವನೂ ತಲೆ ಬಾಗುವುದಿಲ್ಲ, ತಲೆ ಇದ್ದವನು ಬಾಗುವುದಿಲ್ಲ. ಬಾಗಿದವನಿಗೆ ತಲೆಯೇ ಇಲ್ಲ ; ನಮಗಾದ ಅನ್ಯಾಯವನ್ನು 'ಕೊಳ್ಳುವ' ಕಲ್ಲಿನಿಂದ ತೂಗುತ್ತೇವೆ, ನಮ್ಮಿಂದಾದ ಅನ್ಯಾಯವನ್ನು 'ಕೊಡುವ' ಕಲ್ಲಿನಿಂದ ತೂಗುತ್ತೇವೆ.

**ಅನುಭವ** ಹಳೆಯ ತಪ್ಪಿಗೆ ಜಾಣರು ಕೊಡುವ ಹೊಸ ಹೆಸರು ; ಅನುಭವದಂತಹ ಗುರುವೇ ಇಲ್ಲ. ಆದರೆ ಅದೆಷ್ಟು ಗುರುದಕ್ಷಿಣೆ ! ಹಿಂದಿನ ಅನುಭವ ಇಂದಿನ ಗೆಳೆಯನಾದರೆ, ಮುಂದೆ ಅನುಭವವೂ ಬೇಡ, ಗೆಳೆಯನೂ ಬೇಡ.

**ಅನುಮಾನ** ತಲೆಬಾಗಿಲಲ್ಲಿ ಅನುಮಾನವು ಕಾಲಿಟ್ಟರೆ ಹಿತ್ತಲ ಬಾಗಿಲಿಂದ ಪ್ರೇಮವು ಪರಾರಿ; ಅನುಮಾನಿಸುವುದು ಅಂತಹ ತಪ್ಪಲ್ಲ - ಅಂದು ತೋರಿಸುವುದು ಅವಿವೇಕ.

**ಅನೇಕ** ಒಂದಲ್ಲ - ಸುನ್ನೆಯೂ ಆಗಬಹುದು. ಉದಾ : ಅವನಿಗೆ ಅನೇಕ ಹೆಂಡಿರಿದ್ದಾರೆ ಎಂದರೆ ಹೆಂಡತಿಯೇ ಇಲ್ಲ.

**ಅಪ್ಪ** ಅಮ್ಮನ ಸ್ವಂತ ಬ್ಯಾಂಕು.

**ಅಪಕಾರ** 'ಅಪಕಾರ ಮಾಡಿದವನಿಗೆ ಉಪಕಾರ ಮಾಡು' ಎಂದೊಂದು ಗ್ರಂಥದಲ್ಲಿದೆ. 'ಅ, ಉ'ಗಳಲ್ಲಿ ಅದೆಲ್ಲಿಯೋ ಮುದ್ರಣ ದೋಷಣವಿದೆ ?

**ಅಪಘಾತ** ಮಾನವನಿಗೆ ಮುಂಚಿತವಾಗಿ ತಿಳಿಸದೆ ದೇವನು ಅದೆಂದೋ ಏರ್ಪಡಿಸಿರುವ ಕಾರ್ಯಕ್ರಮ.

**ಅಪಜಯ** ತನ್ನ ಸತ್ಯಪ್ರಿಯತೆ, ನಿಸ್ವಾರ್ಥ ಬುದ್ಧಿ, ನಿಷ್ಠುರವಾಣಿ ಮುಂತಾದವೇ ತನ್ನ ಅಪಜಯಕ್ಕೆ ಕಾರಣವಾದುದೆಂದು ಪ್ರತಿಯೊಬ್ಬ ರಾಜಕಾರಣಿಯೂ ಹೇಳುತ್ತಾನೆ. ಜಯ ದೊರೆತರಂತೂ ಇವೇ ಕಾರಣಗಳನ್ನೇ ಹೇಳುತ್ತಾನೆ.

**ಅಪಪ್ರಚಾರ** ಅಪಪ್ರಚಾರ ಮಾಡುವ ನವೆ ಉಳ್ಳವನು ತನ್ನ ಅಪ್ಪನನ್ನೂ ಬಿಡುವುದಿಲ್ಲ.

**ಅಪಮಾನ** ಸಂತೆಯಲ್ಲಿ ಅಪಮಾನವಾದರೇನಂತೆ, ಮನೆಯಲ್ಲಿ ತಿಳಿಯದಿದ್ದರಾಯಿತು ; ಅಪಮಾನವನ್ನು ಸಹಿಸಿಕೊಂಡು ಸುಮ್ಮನಿರುವವನು ಅಪಮಾನಕ್ಕೇ ಲಾಯಕ್ಕು.

**ಅಪರಾಧ** ಇಡೀ ಜಗತ್ತು ನಿನಗೆ ಅಪರಾಧ ಮಾಡಲಿ, ನೀನೇ ಅಪರಾಧ ಮಾಡಿಕೊಳ್ಳುವುದು ಮಾತ್ರ ಅಕ್ಷಮ್ಯ ಅಪರಾಧ.

**ಅಭಾವ** ಅಕ್ಕನ ಗಂಡ ಸತ್ತಾಗ ಭಾವಮೈದುನನು ಅಭಾವ.

**ಅಭ್ಯಾಸ** ಒಳ್ಳೆಯದೇ ಆದರೂ ಅಭ್ಯಾಸವಾದರೇ ಅದೇ ದುರಭ್ಯಾಸವಾಗುತ್ತದೆ.

**ಅಭಿಪ್ರಾಯ** ಅಭಿಪ್ರಾಯಗಳು ಮಕ್ಕಳಿದ್ದಂತೆ - ನಮ್ಮವು ನಮಗೇ ಚಂದ ; ಜಗತ್ತಿನಲ್ಲಿ ಎರಡೇ ಅಭಿಪ್ರಾಯಗಳು, ನನ್ನದೊಂದು, ಮೂರ್ಖರದಿನ್ನೊಂದು ಎನ್ನುವುದು. ಮೂರ್ಖನ ಅಭಿಪ್ರಾಯ ; ಅಭಿಪ್ರಾಯವನ್ನು ಕೊಡಲಾರದಂತಹ ಬಡವನು ಭೂಲೋಕದಲ್ಲಿಯೇ ಇಲ್ಲವಲ್ಲ ?

**ಅಭಿಮಾನ** ಬರೀ ಅಭಿಮಾನ ; ಬಿಟ್ಟಿಯಾಗಿ ದುಡಿಸಿಕೊಳ್ಳುವವನು ಕೊಡುವ ನಗದು ಸಂಬಳ.

**ಅಮರ ಕೃತಿ** ಮಾರಾಟವಾಗಲಾದರ ಗ್ರಂಥ

**ಅಮೃತ** "ಅಮೃತವೆಲ್ಲವೂ ದೇವತೆಗಳ ಪಾಲಾಯಿತು, ವಿಷವೆಲ್ಲವೂ ರಾಕ್ಷಸರಿಗಾಯಿತು, ನಮಗೇನು ?' ಎಂದು ಮಾನವ ಕೇಳಿದ. ಇವೆರಡನ್ನೂ ಒಂದೇ ಬಾಟ್ಲಿನಲ್ಲಿ ಬೆರೆಸಿಕೊಟ್ಟು ದೇವನು ಆ ಬಾಟ್ಲಿಗೆ ಒಂದು ಚೀಟಿಯನ್ನು ಹಚ್ಚಿದ - 'ಹೆಂಣು' ಎಂದು ಅದರ ಮೇಲೆ ಬರೆದು.

**ಅಮ್ಮ** ನಿದ್ರೆ ಇರುವಾಗಲೇ ಎಬ್ಬಿಸಿ, ಎಚ್ಚರವಾಗಿರುವಾಗಲೇ ಮಲಗು ಎನ್ನುವವಳು ; ಪಾಪಿಸಂತಹ ಮಗನನ್ನು ಹೆತ್ತು ತನ್ನ ಜಾತಿಯ ಮುಂಗಸಿಯ ಬಾಯಿಗೆ ಕೊಡುವವಳು.

**ಅಮಾತ್ಯ** ಮಾತಿಗೆ ಸಿಲ್ಲುವವನು ಮಾತ್ಯ, ಮಾತಿಗೆ ಸಿಲ್ಲದವನು ಅಮಾತ್ಯ - ಮಂತ್ರಿ.

**ಅಮೋಘಭಾಷಣ** ಮೋಡಗಳಿಲ್ಲದಾಗ ಮಾಡಿದ ಭಾಷಣ

**ಅಯ್ಯಯ್ಯೋ** ನೀನು ಬಿದ್ದಾಗ ಅಯ್ಯೋ ಎನ್ನುವವರಿದ್ದಾರೆ, ಎದ್ದಾಗ ಅಯ್ಯಯ್ಯೋ ಎನ್ನುವವರೂ ಇದ್ದಾರೆ.

**ಅಯ್ಯೋ ಪಾಪ** ಇತರರಿಗೆ ಅಯ್ಯೋ ಪಾಪ ಎನ್ನುವುದು ಒಳ್ಳೆಯದು. ನಿನಗೇ ಹಾಗೆ ಎನ್ನುವವರು ಬೇಕಾದೀತು, ಎಚ್ಚರಿಕೆ !

**ಅರಣ್ಯ** ಪಾಂಡಿತ್ಯವಿಲ್ಲದವನು ಅರಣ್ಯ ಪಂಡಿತ - ಮಂತ್ರವಿಲ್ಲದವನು ಅರಣ್ಯ ಮಂತ್ರಿ.



**ಅರಮನೆ** ಅರ್ಧ ಮನೆ.

**ಅರಸ** ರಸಿಕನಲ್ಲದವನೆ ಅರಸ.

**ಅರಿವು** ಕೆಲವು ಗಂಡುಗಳಿಗೆ ಹೆಂಣು ಕಾಣುವ ವರೆಗೂ ತಾವು ಗಂಡೆಂಬ ಅರಿವು ಆಗುವುದಿಲ್ಲ. ಹೆಂಣಗೆ ಮಾತ್ರ ಹುಟ್ಟುವ ಮುನ್ನವೇ ಆ ಅರಿವು ಆಗಿರುತ್ತದೆ

**ಅರುಂಧತಿ** ಮುಗಿಲಲ್ಲಿ ಮಾತ್ರವೇ ಇರಲು ಲಾಯಿಖು ; ಎಲ್ಲರೂ ನೋಡಿದರೂ ಇನ್ನೂ ಪತಿವ್ರತೆ ?

**ಅವತಾರ** ದೇವನು ಮನುಷ್ಯನಾಗಿ ಬರುವುದಿಲ್ಲ - ಮಾನವನೇ ದೇವನ ಮಟ್ಟಕ್ಕೆ ಇಳಿಯುತ್ತಾನೆ !

**ಅವಲಕ್ಕಿ** ಅವಲಕ್ಕಿಯನ್ನೂ ಸಹ ತರಲಾರದ ಬಡವನನ್ನು ದೇವನೂ ಸೇರಿಸಲಾರ - ಸುಧಾಮನೇ ಸಾಕ್ಷಿ.

**ಅವಶ್ಯಕ** ಅನವಶ್ಯವಾದುದನ್ನು ಕೊಳ್ಳುವವನು ಅವಶ್ಯವಾದುದನ್ನೆಲ್ಲಾ ಮಾರಬೇಕಾಗುತ್ತದೆ. ಮಡದಿಯನ್ನು ಕೊಳ್ಳುವವನು ಮನೆ ಮಾರುತ್ತಾನೆ.

**ಅವಿವಾಹಿತ** ಅವಿವಾಹಿತರಲ್ಲಿ ಎರಡೇ ಬಗೆಗಳು - ಅತಿ ಸುಖಿಗಳು ಮತ್ತು ಅತಿ ದುಃಖಿಗಳು. ವಿವಾಹಿತರಲ್ಲಿಯೂ ಅಷ್ಟೆ;

ಅವಿವಾಹಿತನು ಒಳ್ಳೆಯ ಗೆಳೆಯನಾಗಬಲ್ಲ, ಒಳ್ಳೆಯ ಯಜಮಾನ, ಒಳ್ಳೆಯ ಸೇವಕ, ಒಳ್ಳೆಯ ಸಹೋದರ ಏನಾದರೂ ಆಗಬಲ್ಲ - ಒಳ್ಳೆಯ ತಂದೆ ಮಾತ್ರ ಆಗಲಾರ ?

**ಅವಿವೇಕಿ** ವಿವೇಕಿಯು ಜಗತ್ತಿನೊಂದಿಗೆ ಹೊಂದಿಕೊಳ್ಳಲು ಯತ್ನಿಸುತ್ತಾನೆ. ಅವಿವೇಕಿಯು ಜಗತ್ತೆ ತನ್ನೊಂದಿಗೆ ಹೊಂದಿಕೊಳ್ಳಲೆಂದು ಹೋರಾಡುತ್ತಾನೆ. ಜಗತ್ತಿನ ಪ್ರಗತಿಯಾಗಬೇಕಾದರೆ ಅವಿವೇಕಿಯಿಂದಲೇ ಆಗಬೇಕು.

**ಅಶ್ಲೀಲ** ನಾವು ಮಾಡುವುದನ್ನು ನೀವು ಆಡುವುದು ಅಶ್ಲೀಲ.

**ಅಸ್ಪೃಶ್ಯ** ಮಹಾ ಮಡಿವಂತ

**ಅಸಾಧ್ಯ** ಬತ್ತಲಿರುವ ಒಬ್ಬನ ವಸ್ತ್ರಾಪಹರಣ ಮಾಡುವುದು ನೂರು ಜನರಿಗೂ ಅಸಾಧ್ಯ.

**ಅಸುರ** ಸುರಾಪಾನ ಮಾಡದವನು ಅಸುರ.

**ಅಸೂಯೆ** ಮೂರನೇ ದರ್ಜೆಯ ಪ್ರೇಮ ; ತನ್ನನ್ನು ತಾನೇ ಸುಡುತ್ತ ಹೋಗುವ ಒಂದು ಬಗೆಯ ನೋವು ; ಹೊಗಳಿಕೆಯ ವಕ್ರಾವತಾರ ; ಅಸೂಯೆ ಇಲ್ಲದೆ ಬಾಳಲು ತಿಳಿದಿದ್ದರೆ ಸಾಹಿತಿಗಳೇ ದೇವರಾಗುತ್ತಿದ್ದರು ; ಅಸೂಯೆ ಇಲ್ಲದ ಪ್ರೇಮಿಯು ಅವಳನ್ನೇನು ಪ್ರೇಮಿಸಿಯಾನು ? ಅಸೂಯೆ ಪ್ರೇಮದೊಂದಿಗೆ ಹುಟ್ಟುತ್ತದೆ. ಪ್ರೇಮವು ಸತ್ತರೂ ಅದು ಮಾತ್ರ ಸಾಯದು ; ಅಸೂಯೆಗೆ ಮುಖ್ಯ ಕಾರಣ ತನಗಿಲ್ಲವೆಂಬುದಲ್ಲ - ಇತರರಿಗಿದೆ ಎಂಬುದು.

**ಅಸಂಪೂರ್ಣತೆ** ಅಸಂಪೂರ್ಣತೆಯೆ ಮಾನವನ ಮೊದಲ ಲಕ್ಷಣ. ಎರಡನೆಯ ಲಕ್ಷಣವಾವುದೆಂಬುದು ಇನ್ನೂ ತಿಳಿದಿಲ್ಲ.

**ಅಹಂಕಾರ** ಪ್ರತಿಯೊಬ್ಬ ಜಾಣನಿಗೂ ಅಹಂಕಾರವಿದ್ದೇ ಇರುತ್ತದೆ. ತಾನೊಬ್ಬ ಕೋಣನೆಂದು ತಿಳಿಯುವವರೆಗೂ ; ದೇವನು ಮೊಟ್ಟ ಮೊದಲು ಗಂಡಿಗೆ ಎಪ್ಪತ್ತೈದು ನಯಾಪೈಸೆ ತೂಕ, ಹೆಣ್ಣಿಗೆ ಇಪ್ಪತ್ತೈದು ನಯಾಪೈಸೆ ತೂಕ ಅಹಂಕಾರವನ್ನು ಹಂಚಿದ ಗಂಡಿಗೆ ಹೆಚ್ಚಾಯಿತು ಎಂದು ಅವಸರದಲ್ಲಿ ಅವನಿಂದ ಇಪ್ಪತ್ತಾರು ನಯಾಪೈಸೆ ತೂಕ ತೆಗೆದು ಇವಳಿಗೆ ಹಾಕಿದ.

**ಅಳಿಯ** ಊರಲ್ಲಿ ಬಂದ ಆಡವಿಯ ದೆವ್ವ ; ಅಳಿಯನು ಒಳ್ಳೆಯವನಾದರೆ, ಇನ್ನೊಬ್ಬ ಮಗನು ದೊರೆತಂತೆ. ಕೆಟ್ಟವನಾದರೆ ಇದ್ದ ಮಗಳೂ ಸತ್ತಂತೆ ; ಅಳಿಯನಿಗೆ ಸಿಟ್ಟು ಬಂದರೆ ಮಗಳನ್ನು ಕರೆದುಕೊಂಡು ಹೋದಾನು ಎಂಬುದು ಮೊನ್ನಿನ ಗಾದೆ ಮಾತು - ಮಗಳನ್ನು ಬಿಟ್ಟೇ ಹೋದಾನು ಎಂಬುದು ನಿನ್ನಿನ ಗಾದೆ ಮಾತು - ಮಗಳೊಟ್ಟಿಗೆ ಇಲ್ಲಿಯೇ ಇದ್ದುಬಿಟ್ಟಾನು ಎಂಬುದು ಇಂದಿನ ತಗಾದೆ ಮಾತು; ಇದ್ದೂರ ಅಳಿಯ ಸಾಕಿದ ಕತ್ತೆಗೆ ಸಮಾನ; ಅಳಿಯನ ಚೀಲ, ಗೆಳೆಯನ ಹೊಟ್ಟೆ ತುಂಬುವುದೇ ಇಲ್ಲ ; ದೀಪಾವಳಿಗೆ ಕೆಲವು ಅಳಿಯಂದಿರು ಮಾವನ ಮನೆಗೆ ಬರುವುದೇ ಇಲ್ಲ - ಹೋಗಿದ್ದರೆ ತಾನೇ ? ರಾಮಾಯಣ ಓದದವನು ಮಗನಾಗಬಾರದು - ಶಾಕುಂತಲ ಓದದವನು ಅಳಿಯನಾಗಬಾರದು ; ಅಳಿಯ ಅಪಿವೇಕಿ ಎಂದು ಹೇಳಿದರೆ ಸಾಲದೇ ? - ಮಗಳು ಅಳುಬುರುಕಿ ಎಂದು ಪ್ರತ್ಯೇಕವಾಗಿ ಹೇಳಬೇಕೆ ?

**ಅಳು** ದುಃಖಿಯ ಏಕ ಮಾತ್ರ ಟಾನಿಕ್ ; ತನಗೇ ಆಗದ ನೋವಿಗಾಗಿ ಯಾವನೂ ಅಳಲಿಲ್ಲ ; ಮಾನವನು

ಅಳುತ್ತಾ ಹುಟ್ಟುತ್ತಾನೆ. ಅಳುವಿನ ಅರ್ಥವು ನಿತ್ಯವೂ ಕೊಂಚ ಕೊಂಚ ಆಗುತ್ತದೆ ; ಸತ್ತ ವಿವೇಕಿಯ ಸಲುವಾಗಿ ಅಳುವ ಬದಲು ಇರುವ ಅವಿವೇಕಿಯ ಸಲುವಾಗಿ ಅಳುವುದು ಹೆಚ್ಚು ಸೂಕ್ತ ; ಸತ್ತವನ ಸಲುವಾಗಿ ಅಳಲು ಸತ್ತವರು ಇದ್ದಾರೆ - ಬದುಕಿದವರ ಸಲುವಾಗಿ ಬದುಕಿದವರು ನಗಲಿ ; ಸುಖವನ್ನೂ ಅಳುತ್ತ ಅನುಭವಿಸುವ ಮಡಿವಂತ ಮೂರ್ಖರೂ ಇದ್ದಾರೆ ; ಕೊಂಚ ನೋವಿಗೇ ಅಳುವವನು ಗುಡ್ಡದಷ್ಟು ಸುಖವು ದೊರೆತರೂ ನಗಲಾರ.





**ಆಕಳಿಸು** ಆ ಕಳಿಸು

**ಆಕಳು** ಆಕಳು ಕೊಡುವುದೆಲ್ಲವೂ ಹಾಲಲ್ಲ. ಮಡದಿ ನುಡಿವುದೆಲ್ಲ ಸುಳ್ಳಲ್ಲ.

**ಆಗಲಿ** ಆಗಡಿರಲಿ ಎಂದೇ ಅನೇಕ ಬಾರಿ ಇದರ ಅರ್ಥ.

**ಆಟ** ಆಟದಲ್ಲಿ ಎರಡು ಬಗೆಯ ಆನಂದಗಳನ್ನು ವಿವೇಕಿಯು ಕಾಣಬಹುದು. ಗೆದ್ದಾಗ ಒಂದು, ಸೋತಾಗ ಇನ್ನೊಂದು.

**ಆಡಿಕೊಳ್ಳು** ಆಡಲಾರದವನು ನೋಡುತ್ತಾ ನಿಲ್ಲುತ್ತಾನೆ. ಮಾಡಲಾರದವನು ಆಡಿಕೊಳ್ಳುತ್ತಾ ಕೂಡುತ್ತಾನೆ.

**ಆಡು** ತಂದೆ ಬದುಕಿರುವಾಗ ಮಗನು ಆಡುವುದನ್ನು ಕೇಳು. ನಂತರ ಅವನು ಮಾಡುವುದನ್ನು ನೋಡು.

**ಆತ್ಮ** ಶಬ್ದಕೋಶಗಳಲ್ಲಿ ಮಾತ್ರವೇ ಉಳಿದು ಇನ್ನೂ ಜೀವ ಹಿಡಿದಿರುವ ಬಡಪ್ರಾಣಿ ; ದೇಹವು ಶಾಶ್ವತವಾದರೆ ಆತ್ಮಕ್ಕೆ ವಿನಾಶವೇ ಗತಿ ; ಅವಳ ಆತ್ಮವು ಶುದ್ಧವಾಗಿದೆ ಎಂದರೆ, ದೇಹವು ಎಂದೋ ದಾರಿ ಹಿಡಿದಿದೆ ಎಂದು ಪ್ರತ್ಯೇಕವಾಗಿ ಹೇಳಬೇಕೆ ? ದೇಹವು ಬೇರೆ - ಆತ್ಮವು ಬೇರೆ ಎನ್ನುವವರಿಗೆ ದೇಹವು ಬೇಕಿಲ್ಲ, ಆತ್ಮವು ಬೇಡವಾಗಿದೆ.

**ಆತ್ಮಗೌರವ** ಆತ್ಮವಿಲ್ಲದವರೇ ಆತ್ಮಗೌರವಕ್ಕಾಗಿ ಹೆಚ್ಚು ಅಳುತ್ತಾರೆ.

**ಆತ್ಮಚರಿತ್ರೆ** ಸುಳ್ಳಿನ ಬಣ್ಣವನ್ನು ಸ್ವತಃ ಬರೆದ ಸತ್ಯದ ಕಂತೆ.

**ಆತ್ಮಸ್ತುತಿ** ನನಗೆ ಆತ್ಮಸ್ತುತಿ ರುಚಿಸುವುದಿಲ್ಲ ಎನ್ನುವುದಕ್ಕಿಂತಲೂ ದೊಡ್ಡ ದೊಡ್ಡ ಆತ್ಮಸ್ತುತಿ ಯಾವುದು ?

**ಆತ್ಮಹತ್ಯೆ** ಬಾಳಿನಲ್ಲಿ ಸೋಲನ್ನು ಒಪ್ಪಿಗೊಳ್ಳಲಾರದವನಿಗೆ ಆತ್ಮಹತ್ಯವೇ ಗತಿ - ಆದರೆ ಆತ್ಮಹತ್ಯವು ಸೋಲನ್ನು ಸಾರಿ ಸಾರಿ ಹೇಳುತ್ತದೆ ; ಸಾವಿನ ಅಂಜಿಕೆ ಇಲ್ಲ- ಬದುಕಿನ ಭೀತಿ ಇದೆ.

**ಆದರ್ಶ** ಆದರ್ಶ ಕನ್ನೆಗಾಗಿ ಹುಡುಕುವವನಿಗೂ ಲಗ್ನವಾಗುವ ಸಂಭವವಿದೆ. ಆದರೆ ಆ ಕನ್ನೆಯೂ ಆದರ್ಶ ವರನಿಗಾಗಿ ಹುಡುಕಬಾರದು.

**ಆದರ್ಶ ದಂಪತಿಗಳು** ಎರಡು ದೇಹಗಳು, ಒಂದೇ ಜೀವ-ಗಂಡ ನಿರ್ಜೀವಿ ! ಗಂಡ ಸಂಗೀತಗಾರ - ಕಿವುಡಿ ಹೆಂಡತಿ, ಈ ಆದರ್ಶ ದಂಪತಿಗಳು ನೋಡಿ.

**ಆದರ್ಶವಾದಿ** ತಾನು ಬಾಳುವ ಮಟ್ಟಕ್ಕಲ್ಲ, ಹೇಳುವ ಮಟ್ಟಕ್ಕೆ ಇತರರು ಬಾಳಲಿ ಎನ್ನುವವನು.

**ಆನಂದ** ದೇವನು ಕೊಡುವ ಸೆರೆ ; ಇತರರಿಗೆ ಕೊಟ್ಟಷ್ಟೂ ಹೆಚ್ಚುತ್ತದೆ ; ನಿನ್ನೊಟ್ಟಿಗೆ ಇದನ್ನು ಒಯ್ಯದಿದ್ದರೆ ಜಗತ್ತಿನಲ್ಲಿ ಎಲ್ಲಿಯೂ ದೊರೆಯಲಾರದು.

**ಆನೆ** ಬಹು ಎತ್ತರದ ಅಂಬಾರಿಯ ಅಡಿಯಲ್ಲಿ ವಾಸ ಮಾಡುವ ಪ್ರಾಣಿ ; ಆನೆ ಎಷ್ಟು ಸೊರಗಿದರೆ ತಾನೆ ಇರುವೆಯಷ್ಟು ಆದೀತು - ಸನ್ಯಾಸಿ ಎಷ್ಟು ಕೆಟ್ಟರೆ ಮಾತ್ರ ಸಂಸಾರಿಯಾದಾನು ? ಮೂವತ್ತಾರು ಅಂಗುಳಗಳು - ಅರ್ಥಾತ್ ಗಜ.

**ಆಭಾರಿ** ಆಭಾರಿಯಾಗಿದ್ದೇನೆ ಎನ್ನುವುದು ಜಾಣನ ಕರ್ತವ್ಯ - ಆಭಾರಿಯಾಗಿರುವ ಎನ್ನುವುದು ಕೋಣನ ಅಧಿಕಾರ; ಆಭಾರಿಯಾಗಿದ್ದೇನೆ ಎಂದರೆ ಇನ್ನೂ ಕೊಂಚ ಕೊಡಿ ಎಂದರ್ಥ ?

**ಆಯುಧ** ಮಗುವಿಗೆ ಅಳು, ಹೆಣ್ಣಿಗೆ ನಗು, ಅವಿವೇಕಿಗೆ ಧೈರ್ಯ, ಅಪ್ರಾಮಾಣಿಕನಿಗೆ ರಾಜಕಾರಣ ಅತ್ಯುತ್ತಮ ಆಯುಧಗಳು ; ಆಯುಧ ಒಡೆಯನಿಗೇ ಶತ್ರುವಾಗಬಲ್ಲದು ; ಸಿಂಹಕ್ಕೆ ಮತ್ತು ಹೆಣ್ಣಿಗೆ ಆಯುಧವೇಕೆ - ಅವಕ್ಕೆ ಅವೇ ಆಯುಧಗಳು.

**ಆಯುಷ್ಕರ್ಮ** ಆಯುಷ್ಯವಿರುವವರೆಗೂ ಅವಶ್ಯವಾಗಿ ಆಗಲೇಬೇಕಾದ ಕರ್ಮ - ಕ್ಷೌರ ; ಕೆಲಸಿಗನಿಂದಾದರೆ ಕತ್ತರಿಸಹಿತ - ದೇಶಭಕ್ತನಿಂದಾದರೆ ಕತ್ತರಿರಹಿತ.

**ಆಯುಷ್ಯ** ಕೇವಲ ನೂರೇ ವರ್ಷಗಳ ಆಯುಷ್ಯ ಸಾಲದು ಎಂದು ಗೋಳಿಡುವವರಲ್ಲಿ ಇಸ್ಪೀಟು ಆಡಿ ಆಯುಷ್ಯವನ್ನು ವ್ಯರ್ಥ ಮಾಡಿದವರೇ ಹೆಚ್ಚು.

**ಆರಂಭ** "ನಾನೊಂದು ಕಾದಂಬರಿಯನ್ನು ಬರೆಯಬೇಕೆಂದಿದ್ದೇನೆ, ಆದರೆ ಎಲ್ಲಿಂದ ಆರಂಭಿಸಬೇಕೋ ತೋಚದಾಗಿದೆ" ಎಂದ ಒಬ್ಬ ಅಮೆಚೂರ ಸಾಹಿತಿ ; ತಿಂಮ ತಕ್ಷಣವೇ ಅತ್ಯುತ್ತಮ ಸಲಹೆಯನ್ನಿತ್ತ - ಪುಟಡದ ಎಡಗಡೆಯಿಂದ !

**ಆರೋಗ್ಯ** ನಿತ್ಯವೂ ಆರೋಗ್ಯದ ಬಗ್ಗೆ ಯೋಚಿಸುತ್ತಿರುವವನು ಅನುಗಾಲವೂ ಸಾಯುತ್ತಲೇ ಇರುತ್ತಾನೆ. ಹೆಂಡತಿಯ ಆರೋಗ್ಯವೇ ಗಂಡನ ಭಾಗ್ಯ ; ಆರೋಗ್ಯವಿದ್ದವನಿಗೇ ಔಷಧಿಯ ಉಪಯೋಗ ಹೆಚ್ಚು.



**ಆವೇಶ** ಹೆಂಡವನ್ನು ಕುಡಿದ ಮನಸ್ಸಿನ ಅಮಲು, ಆವೇಶದಲ್ಲಿ ಮಾಡಿದ ತಪ್ಪನ್ನು ಆಯುಷ್ಯವೆಲ್ಲವೂ ಅನುಭೋಗಿಸಬೇಕಾಗುತ್ತದೆ. ಉದಾ: ಹುಟ್ಟು, ಮದುವೆ, ಮಕ್ಕಳು ; ಅನೇಕರಲ್ಲಿ ಬುದ್ಧಿಯ ಕೊರತೆ ಆವೇಶದಿಂದ ತುಂಬಿ ಬರುತ್ತದೆ. ; ಆವೇಶವನ್ನು ಗೆದ್ದರೆ ಅದು ನಿನ್ನ ಶಕ್ತಿಯನ್ನು ತೋರಿಸುವುದಿಲ್ಲ - ನಿನ್ನ ಆವೇಶವು ನಿಶ್ಯಕ್ತಿಯಾಗಿದೆ ಎಂದಷ್ಟೇ ಹೇಳುತ್ತದೆ.

**ಆಶಾವಾದಿ** ಜನವರಿ ತಿಂಗಳಲ್ಲಿ ಕೇವಲ ಮೂವತ್ತೊಂದೇ ದಿನಗಳು ದುಡಿದರಾಯಿತು ಎನ್ನುವವ ಆಶಾವಾದಿ - ಫೆಬ್ರವರಿ ತಿಂಗಳಲ್ಲಿ ಇಪ್ಪತ್ತೆಂಟೂ ದಿನಗಳು ದುಡಿಯಬೇಕು ಎನ್ನುವವ ನಿರಾಶಾವಾದಿ ; ಇತರರಿಗೆ ಕಷ್ಟ ಬಂದಾಗ ಅಂಜದವನೇ ಆಶಾವಾದಿ; ಕಾಲಾಣೆ ಯಲ್ಲಿ ತೂತಿದೆ ಎನ್ನುವವ ನಿರಾಶಾವಾದಿ - ತೂತಿನ ಸುತ್ತಲೂ ಕಾಲಾಣೆ ಇದೆ ಎನ್ನುವವ ಆಶಾವಾದಿ.

**ಆಶ್ವಾಸ** ಇಲ್ಲ ಎನ್ನುವ ಮಾತನ್ನು ವಡ್ಡರಿಗೆ ಜಾಣರು ಹೇಳುವ ರೀತಿ ; ಆಶ್ವಾಸಗಳ ಮೇಲೆ ಆಶೆ ಇಟ್ಟು ಕುಳಿತರೆ ಶ್ವಾಸ ಉಳಿಯುವುದೂ ಕಷ್ಟ ; ಹಿಂದಿನ ಜನ್ಮದಲ್ಲಿ ಕೊಟ್ಟಿದ್ದರೆ ಮುಂದಿನ ಜನ್ಮದಲ್ಲಿ ತಿರುಗಬಹುದಾದ ಸುಳ್ಳು ಬಾಕಿ.

**ಆಶೀರ್ವಾದ** ಭಾಷಣ ಕೇಳಿ ಬುದ್ಧಿವಂತರಾಗುವಂತಿದ್ದರೆ, ಆಶೀರ್ವಾದಕ್ಕೆ ಮಕ್ಕಳಾಗುತ್ತಿದ್ದವು ; 'ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಎಲ್ಲರೂ ಸದಸ್ಯರಾಗಿ, ದಿನೇ ದಿನೇ ನಿಮ್ಮ ಸಂಘವು ಅಭಿವೃದ್ಧಿಯಾಗಲಿ' ಎಂದು ಆಶೀರ್ವಾದ ಮಾಡುವ ಅಭ್ಯಾಸವುಳ್ಳ ಸಹೃದಯಿಗಳನ್ನು ವಿಧವಾ ಸಮಾಜವು ಆಹ್ವಾನಿಸದಿರಲಿ ಎಂದು ಮುತ್ತೈದೆಯರ ಪ್ರಾರ್ಥನೆ.

**ಆಸ್ಪತ್ರೆ** ಸಾವೆಂಬ ಭವ್ಯಗೃಹದ ಒಳಂಗಳ ; ಈ ಜಗತ್ತೆ ಒಂದು ಆಸ್ಪತ್ರೆ - ಇಲ್ಲಿಗೆ ಬರುವುದು ಬದುಕಲಿಕ್ಕಲ್ಲ, ಸಾಯಲಿಕ್ಕೆ ; ಆಸ್ಪತ್ರೆ ಸ್ಮಶಾನಕ್ಕೆ ಸಮೀಪವಿದ್ದಷ್ಟೂ ಸುಖ - ಹೊರುವವರಿಗೆ.

**ಆಸ್ತಿ** ಗಳಿಸಿದುದು ನ್ಯಾಯಮಾರ್ಗದಿಂದಲಾದರೂ ಉಳಿಸು ವುದೇನೋ ಅನ್ಯಾಯ ಮಾರ್ಗದಿಂದಲೇ ಬೆಳೆಸು ವುದಂತೂ ದುರ್ಮಾರ್ಗದಿಂದಲೇ ; ಎಲ್ಲ ಆಸ್ತಿಯೂ

ಕಳ್ಳಮಾಲೇ - ಸ್ವಾರ್ಜಿತವಾದರೆ ಅವನೇ ಕದ್ದದ್ದು ; ಪಿತ್ರಾರ್ಜಿತವಾದರೆ ಅಪ್ಪನಪ್ಪ ಕದ್ದದ್ದು ; ನಿನ್ನ ಮಗನು ದುಡಿಮೆಗಾರನಾದರೆ ಅವನಿಗೆ ನಿನ್ನ ಅವಶ್ಯಕತೆ ಇಲ್ಲ - ಸೋಮಾರಿಯಾದರೆ ಅರ್ಹತೆ ಇಲ್ಲ.

**ಆಹಾರ** ಆಹಾರವೇ ಭಾಗ್ಯವು ; ದೇವರು ಹಕ್ಕಿ ಮೃಗಗಳಿಗೆ ಕೂಡಾ ಆಹಾರವನ್ನು ಒದಗಿಸುತ್ತಾನೆ. ಆದರೆ ಗೂಡು ಗವಿಗಳಲ್ಲಿ ಇಕ್ಕಿ ಬರುವುದಿಲ್ಲ ; ಸಾಹಿತಿಗೆ ಹಾರವನ್ನು ಹಾಕಿ ಅಪಕಾರ ಮಾಡುವುದರ ಬದಲು, ಆಹಾರ ವನ್ನು ಕೊಟ್ಟು ಉಪಕಾರ ಮಾಡುವುದು ಒಳಿತು.

**ಆಳು** ಆಳಿಗೆ ಕೆಲಸ ಹೇಳು - ಕೂಡಲೇ ನೀನೇ ಮಾಡು.

**ಆಂಜನೇಯ** ಆಂಜನೇಯನ ಮುಖ ಆದೇಕೆ ಹಾಗಾಯಿತು ? - ತನ್ನ ಸಮ್ಮುಖದಲ್ಲಿ ಜರುಗುತ್ತಿದ್ದ ಮದುವೆಗಳನ್ನು ನೋಡಲಾರದೆ ಅತ್ತ ಮುಖ ತಿರುವಿದ.





**ಇತ್ಯಾದಿ** 'ನನಗೆ ತಿಳಿದಿರುವುದು ಇಷ್ಟೇ ಆದರೂ, ಇನ್ನೂ ಹೆಚ್ಚು ತಿಳಿದಿದೆ ಎಂದು ನೀವು ತಿಳಿಯಿರಿ' ಎನ್ನುವ ಮಂತ್ರ.

**ಇಬ್ಬರು** ಒಂದು ತುತ್ತು ಒಬ್ಬನ ಅಥವಾ ಒಬ್ಬಳ ಬಾಯಿ ಮುಚ್ಚಬಲ್ಲದು - ಒಂದು ಮುತ್ತು ಒಂದೇ ಬಾರಿಗೆ ಇಬ್ಬರ ಬಾಯಿಯನ್ನು ಮುಚ್ಚುತ್ತದೆ ; ಇಬ್ಬರು ಸಾಕಿದ ನಾಯಿ ಉಪವಾಸದಿಂದ ಸಾಯುತ್ತದೆ, ಅಜೀರ್ಣದಿಂದ ಸತ್ತಿತೆಂದು ಈರ್ವರೂ ತಿಳಿಯುತ್ತಾರೆ. ಇಬ್ಬರು ಹೆಂಡಿರ ಗಂಡನ ಗತಿಯೂ ಹೀಗೆಯೇ !

**ಇರು** ಯಾವಾಗಲೂ ಎಲ್ಲರೂ ಹೇಗೆ ಇರಬೇಕೋ, ಹಾಗೆ ಯಾವಾಗಲೋ ಒಮ್ಮೆ ಕೆಲವರು ಮಾತ್ರ ಇರುತ್ತಾರಂತೆ.

**ಇಲ್ಲ** ನಾಳೆ ಬಾ ಎನ್ನುವವನಕ್ಕಿಂತಲೂ ಇಂದೇ ಇಲ್ಲ ಎನ್ನುವವನು ಹೆಚ್ಚು ಉದಾರಿ.

**ಇಲಿ** ಇಲಿ ಬೆಕ್ಕಿಗೆ ಅಂಜುತ್ತದೆ ನಿಜ, ಆದರೆ ಬೆಕ್ಕು ಒಳ್ಳೆಯದಾದರೆ, ಇಲಿಯು ಅದನ್ನೇ ಪ್ರಣಯಕ್ಕೆ ಕರೆಯುತ್ತದೆ.

**ಇಂಗ್ಲೀಷು** ಕನ್ನಡ, ತೆಲುಗು. ತಮಿಳು, ಮರಾಠಿ, ಹಿಂದಿ, ತುಳು, ಕೊಂಕಣಿ, ಉರ್ದು ಮುಂತಾದೆಲ್ಲ ಭಾಷೆಗಳು ಬೇಕು - ಇಲ್ಲವಾದರೆ ಇಂಗ್ಲೀಷೊಂದೇ ಸಾಕು; ದಡ್ಡನಿಗೆ

ಕಲಿಯುವ ಯೋಗ್ಯತೆ ಇಲ್ಲದ ಕಾರಣ ದ್ವೇಷಿಸುತ್ತಿರುವ ಭಾಷೆ ಇಂಗ್ಲೀಶು.

**ಇಂದು** ಇಂದು ಎಂಬುದು ನಿನ್ನಿನ ವಿದ್ಯಾರ್ಥಿ - ನಾಳಿನ ಗುರು.



**ಈದರ್ಶ ದಂಪತಿಗಳು** ವಿದ್ಯಾವಂತ ಹೆಂಡತಿ ಮತ್ತು ಅಡುಗೆ ಬಲ್ಲ ಗಂಡ.

**ಈಸ್ಪೀಟು** ಈಸ್ಪೀಟು ಬೇಕು,ಪಣವಿಡುವುದು ಮಾತ್ರ ಬೇಡ ಎನ್ನುವವನು- ಹೆಂಡತಿ ಬೇಕು, ಮಕ್ಕಳು ಮಾತ್ರ ಬೇಡ ಎನ್ನುವವನಷ್ಟೇ ಅನೀತಿವಂತ.



**ಉಡುಪಿ** ಸೀರೆ, ಕುಪ್ಪಸ, ಗೌನು ಮುಂತಾದ ಸ್ತ್ರೀಯರ ಉಡುಪು.

ಉಡುಪನ್ನು ಧರಿಸುವವಳು ಉಡುಪಿ



**ಉಡುಪು** ಉಡುಪಿಗೆ ಕೊಡುವಷ್ಟು ಲಕ್ಷ್ಯವನ್ನು ಅನೇಕರು ದೇಹಕ್ಕೆ ಕೊಟ್ಟಿದ್ದರೆ ಅದೆಷ್ಟು ಚೆನ್ನಾಗಿತ್ತು?

**ಉತ್ಸಾಹ** ಉತ್ಸಾಹವು ಅತಿಯಾಗಬಾರದು-ನೀಡುವ ಮುಂಚೆಯೆ ಉಂಣಬೇಕಾಗುತ್ತದೆ; ವಿವೇಕಿಗೆ ಉತ್ಸಾಹವು ಬಹುಒಳ್ಳೆಯದು-ಆದರೆ ಅದರ ಗುತ್ತಿಗೆಯನ್ನು ಹೆಚ್ಚಾಗಿ ಅವಿವೇಕಿಯೇ ಹಿಡಿಯುತ್ತಾನೆ.

**ಉತ್ಪ್ರೇಕ್ಷೆ** ಹುಟ್ಟು ಸಾವುಗಳ ವಾರ್ತೆಗಳನ್ನು ಸಹ ಉತ್ಪ್ರೇಕ್ಷೆ ಮಾಡಿ ಹೇಳುವ ಸ್ವಂತ ಸುದ್ದಿಗಾರರೂ ಇದ್ದಾರೆ.

**ಉದ್ದನಕಾಲು** ಉದ್ದನಕಾಲ ಚೆಲುವೆ ಎದ್ದು ಇಂದೆ ಓಡಿದಳಂತೆ ಸುದ್ದಿ ಬಂತು, ಊರೆಲ್ಲ ಸುತ್ತಿ ನಿನ್ನೆಯೆ ಮನೆಗೆ ಬಂದಳಂತೆ.

**ಉದ್ಘಾಟನೆ** ಜಗತ್ತಿನಲ್ಲಿ ಅತಿ ಸುಲಭವಾದ ಕೆಲಸ - ಮಂದಿಯ ಮನೆಯಲ್ಲಿ ಉಂಡು ಅವಸರದಿಂದ ಓಡುವುದು.

**ಉದಾರಿ** ಉದ್ಧರಿ ಕೇಳುವವನೇ ಉದಾರಿ

**ಉಪಕಾರ** ನೀನು ಮಾಡಿದ ಉಪಕಾರಗಳನ್ನು ನೀನೇ ನೆನಪಿನಲ್ಲಿಟ್ಟುಗೊಳ್ಳುವುದಕ್ಕಿಂತ ದೊಡ್ಡ ಅಪಕಾರವೇ ಇಲ್ಲ ; ಪಡೆದ ಉಪಕಾರದಷ್ಟು ಬೇಗ ಬೇರಿನ್ನಾದವುದೂ ಹಳೆಯದಾಗದು.

**ಉಪದೇಶ** ಸಾಧ್ಯವಾದರೆ ಮಾಡು - ಇಲ್ಲವಾದರೆ ಉಪದೇಶ ಮಾಡು.

**ಉಪಮಂತ್ರಿ** ಮಂತ್ರಿಯಕ್ಕಿಂತಲು ಕೊಂಬ ಜಾಣ, ಮತದಾರರಕ್ಕಿಂತಲೂ ಬಹು ದಡ್ಡ.

**ಉಪವಾಸ** ಉಪವಾಸ ಮಾಡಲು ಬಾರದವನಿಗೆ ಉಂಣಲೂ ಬಾರದು.

**ಉಪಸಂಪಾದಕ** ಉಪವಾಸ ಬೀಳುವ ಸಂಪಾದಕ.

**ಉಭಯ ಸಂಕಟ** ಒಳಗೆ ಭಾಷಣ-ಹೊರಗೆ ಗುಡುಗು, ಸಿಡಿಲು ; ಒಳಗೆ ರೇಡಿಯೋ ಸಂಗೀತ - ಹೊರಗೆ ಉರಿಬಿಸಿಲು - ಒಳಗೆ ಕಾವ್ಯವಾಚನ - ಹೊರಗೆ ಗಟಾರದ ವಾಸನೆ - ಒಳಗೆ ಮನೆಯವಳು - ಹೊರಗೆ ದೇಶಭಕ್ತರು.

**ಉರುಲು** ಮದುವೆಗಿಂತ ಕೊಂಚ ಕಡಿಮೆ ಕ್ರೂರವಾದದ್ದು ಉರುಲು.

**ಉಳಿಸು** ಇಪ್ಪತ್ತನೆಯ ವಯಸ್ಸಿನಲ್ಲಿ ಜಗತ್ತನ್ನೆ ಉಳಿಸುತ್ತೇನೆ ಎಂದು ಘರ್ಜಿಸಿದೆ ; ಮೂವತ್ತರಲ್ಲಿ ನನ್ನ ದೇಶವು ಉಳಿಯಲೇ ಬೇಕು ಎಂದು ಆರ್ಭಟಿಸಿದೆ ; ನಲವತ್ತರಲ್ಲಿ ನನ್ನ ಹೆಂಡತಿ, ಅವಳ ತಮ್ಮ, ನನ್ನ ಮಕ್ಕಳು, ಮತ್ತು ನಾನು ಉಳಿದರೆ ಒಳಿತು ಎಂದು ಗೊಣಗಿದೆ ; ಐವತ್ತರಲ್ಲಿ ನಾನು, ಗಳಿಸುವ ಮಗ - ಸಾಧ್ಯವಿದ್ದರೆ ನನ್ನ ಹೆಂಡತಿ ಕೂಡ - ಉಳಿಯಲಿ ಎಂದು ದೇವನಲ್ಲಿ ಪ್ರಾರ್ಥಿಸಿದೆ ; ಅರವತ್ತರಲ್ಲಿ 'ದೇವರೇ ನಾನು ಮತ್ತು ನನ್ನ ಪಿಂಚನಿ ಎರಡು ಉಳಿದರೆ ಸಾಕೇ ಸಾಕು' ಎಂದು ಅತ್ತೆ.

**ಉಣ್ಣು** ಹಲವರು ಹೆಚ್ಚು ಕಷ್ಟಪಟ್ಟು ಉಣ್ಣುತ್ತಾರೆ - ಕೆಲವರು ಹೆಚ್ಚು ಉಂಡು ಕಷ್ಟ ಪಡುತ್ತಾರೆ.



**ಊಟ** ನನ್ನ ಮನೆಯೂ ನಿನ್ನದೆಂದೇ ತಿಳಿ - ಆದರೆ ನಿನ್ನ ಮನೆಯಲ್ಲಿಯೇ ಊಟ ಮುಗಿಸಿ ಬಾ.

**ಊಟದ ಸಮಯ** ಶ್ರೀಮಂತನಿಗೆ ನೆನಪು ಆದಾಗ - ಬಡವನಿಗೆ ಅನ್ನ ದೊರೆತಾಗ.

**ಊದುಬತ್ತಿ** ದೇವರ ಬೀಡಿ.

**ಊರ್ವಶಿ** ರಂಭೆಯೆಂಬ ದೇವ ವೇಶ್ಯೆಯ ಸವತಿ ; ಋಷಿಗಳ ಮಧ್ಯೆ ಘೋರ ತಪಸ್ಸಿನ ಟೋರ್ನಮೆಂಟ್ ಜರುಗಿದಾಗ ಪಂಚೇಂದ್ರಿಯಗಳನ್ನು [illegible] ಜಿತಕಾಮರಿಗೆ ಲಭಿಸುವ ರೋಲಿಂಗ್ ಕಪ್.

**ಊಸರವಳ್ಳಿ** ಹೆಣ್ಣು ಮನಸ್ಸು ಬದಲಾಯಿಸುವುದನ್ನು ಕಂಡು ಊಸರವಳ್ಳಿಯೂ ತನ್ನ ಮೈಬಣ್ಣವನ್ನು ಬದಲಾಯಿಸಿತಂತೆ-ಕೊನೆಗೆ ಸೋತೆ ಎಂದಿತಂತೆ, ಪಾಪ!

**ಊಹುಂ** ಊಹುಂ ಎನ್ನಲು ಮಾತ್ರ ಹೆಣ್ಣು ಕಲಿತಿದ್ದರೆ, ಜಗತ್ತಿನ ಅರ್ಥ ಅನರ್ಥ ಪರಂಪರೆ ಎಂದೋ ಇಲ್ಲವಾಗುತ್ತಿತ್ತು.



**ಋಣ** ನಾನು ನಿನಗೆ ಋಣಿ ಎನ್ನುವುದರ ಅರ್ಥ- ಈಗ ಮತ್ತೆ ಋಣಿಯಾಗಲು ಇಚ್ಛಿಸುತ್ತೇನೆ ಎಂದು.

**ಋಷಿ** ರೋಷ ಉಳ್ಳವನೇ ಋಷಿ.



**ಎಚ್ಚರ** ನಿದ್ರಿಸುವಾಗಿನಕ್ಕಿಂತಲೂ ಎದ್ದಾಗಲೇ ಅನೇಕರು ಕಡಿಮೆ ಎಚ್ಚರವಾಗಿರುತ್ತಾರೆ.

**ಎಡವು** ಎಡವಿದ ಕಾಲೇ ಎಡವುವುದು ಹೆಚ್ಚು
ಎಡವಿದ ಕಲ್ಲೇ ಎಡುವುವುದು ಹುಚ್ಚು !

**ಎತ್ತರ** ಎಲ್ಲರೂ ಅಷ್ಟೇ ಎತ್ತರ - ಇರಿಬೆಯೂ ತನ್ನ ಅಡಿಯಿಂದ ಆರು ಅಡಿ ಇದ್ದೇ ಇದೆ.

**ಎತ್ತು** ಎತ್ತಿನಂತೆ ದುಡಿದರೆ ಬ್ರಾಹ್ಮಣನಂತೆ ತಿನ್ನಬಹುದು. ಬ್ರಾಹ್ಮಣನಂತೆ ದುಡಿದರೆ — ?

**ಎಂಟು** ಕೆಲವರಿಗೆ ವಾರದಲ್ಲಿ ಎಂಟು ದಿನಗಳೂ ರಜೆ.

**ಎಂಮೆಲೆ** ಒಂದು ಕಾಲು ಜೇಲಿನಲ್ಲಿ - ಮೂರು ಕಾಲು



ಅಸೆಂಬ್ಲಿಯಲ್ಲಿ ; ಅಂದು ರಾಜ ಅತಿಥಿ - ಇಂದು ಪ್ರಜಾಪತಿ ; ಅಂದಿಗೆ ಅದೇ ಸುಖ - ಇಂದಿಗೆ ಇದೇ ಸುಖ ; ಗಿರಿಯನ್ನು ಕಂಡವನು ದಾಸಪ್ಪನಾದ - ಜೇಲು ಕಂಡವ ಎಂಮೆಲೆಯಾದ ; ನೀವೇ ಮಾಡಿದರೆ ನಾನು ಒಂಮೆಲೆ ಎಂಮೆಲೆಯಾದೆ.



ಅನೇಕರಿಗೆ ಹೆಂಡತಿಯ ಹೆಸರು.

**ಏಕಪತ್ನಿತ್ವ** ಒನ್ ವೇ ಟ್ರಾಫಿಕ್

**ಏಕಾದಶಿ** ಹೊಟ್ಟೆ ತುಂಬಿದವನು ಏಕಾದಶಿ ಮಹಿಮೆಯನ್ನು ಬಹು ಚೆನ್ನಾಗಿ ಭೋದಿಸಬಲ್ಲ.



**ಏಕಾಂತ** ಏಕಮಾತ್ರ ಗಂಡ ಉಳ್ಳವಳು; ಅತೃಪ್ತಿಯಲ್ಲಿರುವವನಿಗೆ ಏಕಾಂತವೂ ಸಂತೆಯೇ.

**ಏಕೆ** ಚಿಕ್ಕ ಮಗು ಮಾತು ಮಾತಿಗೆ ಕೇಳುವ ಈ 'ಏಕೆ'ಯಲ್ಲಿಯೇ ಎಲ್ಲ ತತ್ವಜ್ಞಾನದ ತಥ್ಯವು ಅಡಕವಾಗಿದೆ.

**ಏಡಿ** ತಲೆ ಇಲ್ಲದ ಏಕ ಮಾತ್ರ ಪ್ರಾಣಿ.

**ಏನ್ರೀ** ಅನೇಕರಿಗೆ ಗಂಡನ ಹೆಸರು.

**ಏಳು** ಬೀಳುವುದು ತಪ್ಪಲ್ಲ - ಆದರೆ ಬಿದ್ದ ನಂತರ ಏಳದೆ ಇರುವುದು ಶುದ್ಧ ತಪ್ಪು.



**ಐವತ್ತು** ಐವತ್ತು ವರ್ಷಕ್ಕೆ ಜಾಣನಾಗದವನು ಐದು ನೂರು ಜನ್ಮವೆತ್ತಿದರೂ ಅಷ್ಟೆ.

**ಐವತ್ತೈದು** ಐವತ್ತೈದರ ನಂತರ ಮಾನವನ ಬಾಳು, ಕೇಳಿದ ಹಳೆ ಕತೆಯನ್ನೇ ಮತ್ತೊಮ್ಮೆ ಕೇಳಿದಷ್ಟು ನೀರಸ ವಾಗುತ್ತದೆ.



**ಒಡವೆ** ಒಡವೆಯನ್ನು ಮಾಡಿಸುವವನು ದಡ್ಡ- ಮಾಡಿಸಿದ ಒಡವೆಯನ್ನು ಮಾರುವವನು ದಡ್ಡ - ಸಮಯ ಬಂದಾಗ ಮಾರುವವನು ದಡ್ಡ ; ಪ್ರತಿಯೊಂದು ಹೆಂಣಿಗೂ ಇಬ್ಬರು ಪ್ರಾಣಪ್ರಿಯರು, ಗಂಡ ಮತ್ತು ಒಡವೆ - ಗಂಡನನ್ನು ಬೇಡೆಂದ ಹೆಂಣು ಬೇಕಾದಷ್ಟು

ಇವೆ - ಒಡವೆಯನ್ನು ? ಬಡವನ ಮಡದಿಗೆ ಮಕ್ಕಳೇ ಒಡವೆ.

**ಒಪ್ಪಿಗೊಳ್ಳು** ತಪ್ಪು ಒಪ್ಪುಗೊಳ್ಳುವವನನ್ನು ಎಂದಿಗೂ ನಂಬಬೇಡ - ಇನ್ನೊಂದು ತಪ್ಪು ಮಾಡಲು ಅವನು ಹಾದಿ ಮಾಡಿಕೊಳ್ಳುತ್ತಿದ್ದಾನೆ.

**ಒಪ್ಪಿಸು** ಬಹು ಚೆನ್ನಾಗಿ ಮಾತನಾಡುವ ಶಕ್ತಿ ಗಂಡಿಗಿದೆ, ಬಹು ಬೇಗ ಒಪ್ಪಿಸುವ ಯುಕ್ತಿ ಹೆಂಣಿಗಿದೆ.

**ಒಪ್ಪು** ಒಪ್ಪು ತಪ್ಪುಗಳ ಕಲ್ಪನೆ ನಿನ್ನಲ್ಲಿ ಇಂದು ದೃಢವಾದರೆ ನಿನ್ನ ಪ್ರಗತಿ ನಿನ್ನೆಯೇ ಸತ್ತಿದೆ.

**ಒಬ್ಬಂಟಿಗ** ಪ್ರಕೃತಿಯಲ್ಲಿರುವ ಸೌಂದರ್ಯ ಒಬ್ಬಂಟಿಗನಿಗೆ ಹೆಚ್ಚಾಗಿ ಉಳಿಯುತ್ತದೆ. ವಿವಾಹಿತನಿಗೆ ಕೊಂಚವೇ ಕಡಿಮೆ ಬೀಳುತ್ತದೆ.

**ಒರಳು** ಒರಳು ಒಲ್ಲೆ ಎಂದರೆ ಬೆಳ್ಳುಳ್ಳಿ ವಾಸನೆಯನ್ನು ಬೇರಾರು ಸಹಿಸಬೇಕು ?

**ಒಳದಾರಿ** ಸಾಮಾನ್ಯವಾಗಿ ಬಹು ಉದ್ದನ ದಾರಿ.

**ಒಳಿತು** ನೌಕರಿಯಾಗುವ ಮುನ್ನ ಗಂಡು ಓದು ಮುಗಿಸುವುದು ಒಳಿತು, ಮಕ್ಕಳಾಗುವ ಮುನ್ನ ಹೆಂಣು ಮದುವೆಯಾಗುವುದು ಒಳಿತು.

**ಒಳ್ಳೆಯವನು** ಒಳ್ಳೆಯವನು ಬಾಳಿ ಜಗತ್ತಿಗೆ ಒಳಿತು ಮಾಡುತ್ತಾನೆ, ಕೆಟ್ಟವನು ಸತ್ತು ಜಗತ್ತಿಗೆ ಒಳಿತು ಮಾಡುತ್ತಾನೆ - ಒಳ್ಳೆಯದನ್ನು ಮಾಡುವ ಇಬ್ಬರೂ ಒಳ್ಳೆಯವರೇ ! ಕಾಯಿಲೆಯಿಂದ ಮನುಷ್ಯನು ತೆಳ್ಳನವನಾಗಬಹುದು. ಕಾಯಿಲೆಯಿಂದ ಮನುಷ್ಯನು ಒಳ್ಳೆಯವನಾಗಲು ಸಾಧ್ಯವೇ ? ಒಬ್ಬನನ್ನು ಒಳ್ಳೆಯವನನ್ನಾಗಿ ಮಾಡಲು ಒಬ್ಬಳ ಹೃದಯವೇ ಸಾಕು-ಒಬ್ಬಳನ್ನು ಒಳ್ಳೆಯ

ವಳನ್ನಾಗಿ ಮಾಡಲು ಸಾವಿರ ತಲೆಗಳೂ ಸಾಲವು ; ಸೂಳೆಯ ಮನೆಯಿಂದ ಯಾವ ಒಳ್ಳೆಯವನಿಗೂ ಕೆಡುಕು ಆಗಲಿಲ್ಲ - ದೇವನ ಗುಡಿಯಿಂದ ಯಾವ ಕೆಟ್ಟವನಿಗೂ ಒಳಿತು ಆಗಲಿಲ್ಲ ; ಒಳ್ಳೆಯವನು ಅಥವಾ ಕೆಟ್ಟವನು ಎಂಬುದು ಒಬ್ಬನ ಬಗ್ಗೆ ಇನ್ನೊಬ್ಬನು ಪಡುವ ಕೇವಲ ಅಭಿಪ್ರಾಯ, ಅಷ್ಟೇ; ಸುಖಿಯಾಗಿದ್ದಾಗ ಮಾನವನು ತಪ್ಪದೆ ಒಳ್ಳೆಯವನಾಗಿರುತ್ತಾನೆ. ಒಳ್ಳೆಯಯವನಾಗಿದ್ದಾಗಲೆಲ್ಲಾ ಸುಖಿಯಾಗಿರಲೇಬೇಕೆಂಬ ನಿಯಮವಿಲ್ಲ; ಕೊಂಚ ಒಳ್ಳೆಯತನ ಕೆಲಸಕ್ಕೆ ಬರುವುದಿಲ್ಲ - ಬಹು ಒಳ್ಳೆಯತನ ಬಾಳಲು ಬರುವುದಿಲ್ಲ.




**ಓಟ** ಓಟದ ಸ್ಪರ್ಧೆಯಲ್ಲಿ ಸ್ತ್ರೀಪುರುಷರೀರ್ವರೂ ಇದ್ದರೆ ಸ್ತ್ರೀಯರನ್ನು ಕೊಂಚವಾದರೂ ಮುಂದು ನಿಲ್ಲಿಸಬೇಡವೇ - ಒಂದು ಫರ್ಲಾಂಗಿನ ಓಟದಲ್ಲಿ ಎರಡು ನೂರ ಇಪ್ಪತ್ತೊಂದು ಗಜಗಳಾದರೂ ಬೇಕು.




**ಔಷಧಿ** ಔಷಧಿಯಿಂದ ಕಾಯಿಲೆ ಒಂದೇ ವಾರದಲ್ಲಿ ಗುಣವಾಗುತ್ತದೆ - ಔಷಧಿ ಇಲ್ಲವಾದರೆ ಏಳು ದಿನಗಳು ಬೇಕಾಗಬಹುದು ; ದೇಹದ ಖಾಯಿಲೆ ಆತ್ಮಕ್ಕೆ ಔಷಧಿಯಾಗುವುದೂ ಉಂಟು ; ಮಾನವನಿಗೆ

ಕಾಯಿಲೆ ಬರುತ್ತದೆ. ಗುಣವೂ ಆಗುತ್ತದೆ, ಸಾಯುತ್ತಾನೆ ಕೂಡ, ಅಂತೆಯೇ ಪಶುವೂ ಸಹ - ಆದರೆ ಮಾನವನು ಅದೇಕೋ ಔಷಧಿ ಬೇಡುತ್ತಾನೆ !



ಅಂಕೆ ಸಂಖ್ಯೆ



**ಅಂಜಿಕೆ** ಅಜ್ಜನ ವಯಸ್ಸು ತಿಳಿದಿರಬೇಕು- ತಿಳಿದಿರುವುದರಲ್ಲೇ ಆನಂದದಷ್ಟು ಅಂಜಿಕೆಯೂ ಇವೆ.

**ಅಂಜು** ಅಪ್ಪನ ಕೋಪಕ್ಕೆ ಅಂಜದಿದ್ದರೆ ಬಿಡಲಿ - ಅಮ್ಮನ ಅಳುವಿಗೆ ಅಂಜದ ಮಗನು ಮಗನೆ ?

**ಅಂತ್ಯಜ** ಕಡೆಗೆ ಹುಟ್ಟಿದ ಮಗ ಅಥವಾ ಮಗಳು ; ದೇವನು ಕಟ್ಟಕಡೆಗೆ ಸೃಷ್ಟಿಸಿದ ಪ್ರಾಣಿ - ಮನುಷ್ಯ !

**ಅಂತರ** ಸತ್ಯಾಸತ್ಯಗಳ ಮಧ್ಯೆ ಇಡೀ ಜಗತ್ತನ್ನೆ ಇಡುವಷ್ಟು ಅಂತರವಿದೆ - ಕೂದಲೆಳೆಯನ್ನೂ ಇಡಲಾರದಷ್ಟು ಸಾಮೀಪ್ಯವೂ ಇದೆ.

**ಅಂತರಾತ್ಮ** ಅಂತರಾತ್ಮನ ಅಪ್ಪಣೆಯ ಮೇರೆಗೆ ಕೆಲವು ದೇಶ ಭಕ್ತರು ಅಂತರಾತ್ಮನೊ-ಟ್ಟಿಗೆ ಜೇಲಿಗೆ ಹೋದರು. ಹೊರಬರುವಾಗ ತಾವು ಮಾತ್ರ ಬಂದರು. ಅಂತ ರಾತ್ಮ ಅಲ್ಲಿಯೇ ಉಳಿದ ಪಾಪ !



**ಅಂತರಂಗ** ಅಂತರಂಗ ಶುದ್ಧಿಗೆ ಏಕಮಾತ್ರ ಅತ್ಯುತ್ತಮ ಸಾಧನ.

**ಅಂತೆ** ಸುಳ್ಳೆಂಬ ಮಹಾವೃಕ್ಷದ ಮೂಲಬೀಜ.



**ಕರ್ಚು** ಅರಿತು ಕರ್ಚು ಮಾಡುವವನಿಗೆ ದೇವನೇ ಬ್ಯಾಂಕು; ಗಳಿಸುವ ಮುನ್ನ ಕರ್ಚು ಮಾಡುವವನು ಸಾಯುವ ಮುನ್ನ ಬಿಕ್ಕೆ ಬೇಡುತ್ತಾನೆ. ಉಳಿಸಬೇಕಾದಾಗ ಖರ್ಚು ಮಾಡಬೇಡ - ಖರ್ಚು ಮಾಡಬೇಕಾದಾಗ ಉಳಿಸಬೇಡ.

**ಕಚ್ಚು** ಎರಡು ಹಾವುಗಳು ಕಚ್ಚಾಡಿ ಒಂದು ಸತ್ತರೆ, ಬದುಕಿದುದು ಹೆಣ್ಣು ಎಂದು ಪ್ರತ್ಯೇಕವಾಗಿ ಹೇಳಬೇಕೆ? ಕಚ್ಚಿದವರನ್ನೆಲ್ಲ ತಿರುಗಿ ಕಚ್ಚಲು ಸಾಧ್ಯವಿಲ್ಲ - ಹುಚ್ಚು ನಾಯಿ, ಹೊಸ ಎಕ್ಕಡ ಅರಿಯದೆ ಕಚ್ಚುತ್ತವೆ. ಹೊಲಸು ವಿಮರ್ಶಕ ಅರಿತು ಕಚ್ಚುತ್ತಾನೆ.

**ಕಟುಕ** ತಾನು ಕೊಲ್ಲಲೇ ಇಲ್ಲದ ಪ್ರಾಣಿ ಸತ್ತಾಗ ಕಟುಕನೂ ಕಣ್ಣೀರು ಸುರಿಸುತ್ತಾನೆ.

**ಕತ್ತಲು** ಜಗತ್ತಿನ ಆರಂಭದಲ್ಲಿ ಬರೀ ಕತ್ತಲೆ ಇದ್ದಿತು. ದಿಕ್ಕು ಕಾಣದ ಗಂಡು ಬೆಳಕನ್ನು ಬೇಡಿತು - ದೇವನು ಬರೀ ಬೆಳಕನ್ನೇ ಕೊಟ್ಟ. ಹೆಣ್ಣು ಹೋಗಿ ದೇವನಲ್ಲಿ ಮೊರೆ ಇಟ್ಟಿತು. 'ನನಗೆ ನಾಚಿಕೆಯಾಗುತ್ತಿದೆ' ಎಂದು - ಆಗ ದೇವನು ಮತ್ತೆ ಕೊಂಚ ಕತ್ತಲನ್ನು ಕಳಿಸಿ 'ಇನ್ನು ಬರಬೇಡಿ ಹೋಗಿ, ಏನಾದರೂ ಮಾಡಿಕೊಳ್ಳಿ' ಎಂದ - ಜಗತ್ತು ಇನ್ನೂ ಬೆಳೆಯುತ್ತಲೇ ಇದೆ.

**ಕರ್ತವ್ಯ** ದೇವನೆಂಬ ದಣಿಗೆ ಮನುಷ್ಯನು ಕೊಡಬೇಕಾದ ಬಾಕಿ.

**ಕತೆ** ಮೂಕನೂ ಕತೆ ಹೇಳುತ್ತಾನೆ. 'ಹೂಂ' ಗುಟ್ಟುವ ಬಕರಾ ದೊರೆತರೆ.

**ಕತ್ತೆ** ಏಳು ದಿನಗಳವರೆಗೂ ಈಜುವ ಶಕ್ತಿ ಕತ್ತೆಗಿದೆ. ಆದರೆ ನೀರು ಕಂಡೊಡನೆಯೇ ಈಜನ್ನೇ ಮರೆಯುತ್ತದೆ.



ಕಂಡಕಂಡವರನ್ನೆಲ್ಲ ಕತ್ತೆ ಎಂದು ಕತ್ತೆಯ ಕಿಮ್ಮತ್ತು ಕಳೆಯಬೇಡ ; ಕೆಲವು ಊರುಗಳಲ್ಲಿ ಕತ್ತೆಗಳೇ ಇಲ್ಲವಂತೆ - ಮನುಷ್ಯರಿದ್ದಾರಲ್ಲ, ಸಾಲದೇ ? ಎಲ್ಲರನ್ನೂ ಕಾಯುವ ದೇವನು ಕತ್ತೆಯನ್ನು ಕಾಯುತ್ತಾನೆ.

ಕತ್ತೆಯನ್ನು ನೋಡಲಾರೆ ಎನ್ನುವವನು ಕನ್ನಡಿಯನ್ನು ನೋಡಲು ಅಂಜಿದನಂತೆ.

**ಕದ** ಮುಚ್ಚಿದ ಕದವು ಕಳ್ಳರನ್ನಷ್ಟೆ ಕರೆಯಬಹುದು. ತೆರೆದಿಟ್ಟ ಕದವು ಸಂಪನ್ನರಿಗೂ ಬಾಯಿ ನೀರೊಡೆಸುತ್ತದೆ.

**ಕದನ** ಹೆಂಡತಿಯೊಡನೆ ಕದನ ಬೇಡ ಎನ್ನುವವನು ಕದನವಾಡಲು ಅನುಗಾರವೂ ಸಿದ್ಧನಿರಬೇಕು.

**ಕನ್ನ** ಕನ್ನ ಹಾಕುವವನೂ ದೇವನ ಮೇಲೆ ಭಾರ ಹಾಕಿಯೇ ಆರಂಭಿಸುತ್ತಾನೆ.

**ಕನ್ನಡ** ಕನ್ನಡದಲ್ಲಿ ನಾಲ್ಕು ಬಗೆ - ಹೋದುದು ಹಳೆಗನ್ನಡ, ಹೋಗುತ್ತಿರುವುದು ನಡುಗನ್ನಡ, ನಡೆಯುತ್ತಿರುವುದು ಬಡಕನ್ನಡ. ಬರಲಿರುವುದು ಎಬಡಕನ್ನಡ.

**ಕನ್ನಡಕ** ಕಿವಿಗೆ ಭಾರವಾಗುತ್ತದೆ-ಕಣ್ಣಿಗೆ ಉಪಕಾರವಾಗುತ್ತದೆ; ಕೆಲವರು ಕನ್ನಡಕವನ್ನು ಧರಿಸಿಯೇ ಮಲಗುತ್ತಾರೆ. ಕನಸಿನಲ್ಲಿ ಕಾಣಬಹುದಾದವಳ ಮುಖವು ಮಸುಕು ಮಸುಕಾಗಿ ಕಂಡರೆ, ಎದ್ದಮೇಲೆ ಗುರುತಿಸುವುದೆಂತು ?

**ಕನ್ನಡಿ** ಅಪ್ಪನ ಮುಖವೇ ಅಮ್ಮನ ಮನಸ್ಸಿಗೆ ಕನ್ನಡಿ ; ನೂರು ನಯಾಪೈಸೆ ಹರಿಶ್ಚಂದ್ರ ; ಯಾವ ಗೆಳೆಯನೂ ಹೇಳಲಾರದುದನ್ನು ಕನ್ನಡಿ ಹೇಳುತ್ತದೆ.

**ಕನಸು** ಅಜೀರ್ಣವೇ ತಂದೆ, ಆಲೋಚನೆಯೇ ತಾಯಿ, ಕನಸು ಇವುಗಳ ಕೂಸು ; ಬಾಳಿನಲ್ಲಿ ಕಾಣಲಾರದುದನ್ನು ತೋರಿಸಬಲ್ಲ ಮಾಯೆ-ಉದಾ: ನಿಸ್ವಾರ್ಥಿ, ದೇಶಭಕ್ತ, ಶ್ರೀಮಂತ ಸಾಹಿತಿ, ನಿಗರ್ವಿ, ವಿದ್ಯಾವಂತೆ;

ಒಬ್ಬನ ಬಾಳನ್ನು ಹಾಳು ಮಾಡು ಬೇಕಾದರೆ- ಅವನ ಕನಸನ್ನು ಮಾತ್ರ ಕೆಡಿಸಬೇಡ. ಕನಸು ಎಂದಿಗಾದರೂ ನಿಜವಾದುದುಂಟೆ ಎನ್ನುವವನು ಎಂದೂ ಒಳ್ಳೆಯ ಕನಸನ್ನೇ ಕಂಡಿಲ್ಲ. ಹೆಂಡತಿಯಕಿಂತಲೂ ಗಂಡನು ಕಡಿಮೆ ನಿದ್ರಿಸುತ್ತಾನೆ - ಕನಸಿನಲ್ಲಿ ಹೆಂಡತಿ ಕಾಣುತ್ತಾಳೆಂಬ ಭಯ. ಕನಸಿನಲ್ಲಿಯೂ ತಪ್ಪನ್ನು ಮಾಡಬೇಡ - ಎಚ್ಚೆತ್ತಮೇಲೆ ತಿದ್ದಿಕೊಳ್ಳಲು ಆಗದು.

**ಕನ್ಯಾಬಲಿ** ಕನ್ನೆಗಳ ಬಲ ಉಳ್ಳವಳು - PIMP ಣಿ

**ಕನ್ನೆ** ಇನ್ನೂ ಪತಿವ್ರತೆಯಾಗಿಲ್ಲದವಳು ; ಜಗತ್ತಿನ ಕನ್ನೆಗಳೆಲ್ಲವೂ ಒಳ್ಳೆಯವೆ - ಕೆಟ್ಟ ಹೆಂಡಂದಿರು ಎಲ್ಲಿಂದ ಬಂದರು ? ಕನ್ನೆಗೆ ಗಂಡ ಮಾತ್ರ ಸಾಕು - ಹೆಂಡತಿಗೆ ಜಗತ್ತಿನಲ್ಲಿರುವುದೆಲ್ಲವೂ ಬೇಕು.

**ಕಪಿ** ಕನ್ಯಾಪಿತೃ

**ಕ್ರಮ** ಸಂಜೆಗೆ ಸಾಯುವುದಿದ್ದರೂ ಸರಿಯೆ, ಕ್ರಮವೇನೆಂಬುದನ್ನು ಇಂದು ಮದ್ಯಾಹ್ನ ಕಲಿತರೂ ವ್ಯರ್ಥವಲ್ಲ.

**ಕರ್ತವ್ಯ** ಮಾಡಿದ ತಪ್ಪನ್ನು ಮುಚ್ಚಿಕೊಳ್ಳಲು ಮೂರ್ಖನು ಅದಕ್ಕೆ ಕರ್ತವ್ಯದ ಮುಸುಕು ಹಾಕುತ್ತಾನೆ.

**ಕರಳುಗಾರಿಕೆ** ಸಿಕ್ಕ ಸೆರೆ ಕುಡಿದರೂ ಆರೋಗ್ಯವನ್ನು ಕೆಡಿಸಿಕೊಳ್ಳದ ಕರುಳಿನಶಕ್ತಿ.

**ಕಲಹ** ಪ್ರಣಯಿಗಳು ಪ್ರಕೃತಿಯಿಂದ ಪಡೆದ ಪ್ರೇಮವೆಂಬ ಸಾಲಕ್ಕೆ ಆಗಾಗ್ಗೆ ಕಟ್ಟಬೇಕಾದ ಕಂತು ; ಪ್ರೇಮಕ್ಕೆ ಕಲಹವೇ ಆಹಾರ - ಹೆಚ್ಚಾದರೆ ಅಜೀರ್ಣದಿಂದ ಸಾಯುತ್ತದೆ. ಕಡಿಮೆಯಾದರೆ ಉಪವಾಸದಿಂದ ಸಾಯುತ್ತದೆ.

**ಕಲಾವಿದ** ಜೀವನವನ್ನು ಇದ್ದಂತೆ ನೋಡುವವನಲ್ಲ. ತನಗೆ ಬೇಕಾದಂತೆ ನೋಡುವವನು ; ಕಲಾವಿದನ ಹೆಂಡತಿಗೆ ಸವತಿಯ ಕಾಟ ತಪ್ಪಿದ್ದಲ್ಲ - ಕಲೆಯೇ ಮೊದಲ ಸವತಿ ; ಕೈಯ್ಯಲ್ಲಿ ಕಾಸು ಇದ್ದಾಗ ಕಾಗದ ಬರೆಯುವುದಿಲ್ಲ. ಇಲ್ಲದಾಗ ತಾರು ಕಳಿಸುತ್ತಾನೆ.

**ಕಲಿ** ಕಲಿಯುವುದು ಕಡ್ಡಿಯಷ್ಟೇ ಇದ್ದರೂ ಮರೆಯುವುದು ಗುಡ್ಡದಷ್ಟಿದೆ; ಮರೆಯಲು ಕಲಿಯಬೇಕು - ಕಲಿಯಲು ಮರೆಯಬಾರದು ; ಕೆಲವರು ಏನನ್ನೂ ಕಲಿಯಲಾರರು - ಎಲ್ಲವೂ ಅವರಿಗೆ ಬಹುಬೇಗ ಅರ್ಥವಾಗಿ ಬಿಡುತ್ತದೆ. ಪಾಪ !

**ಕಲೆ** ಕಲೆಯನ್ನು ಮೆಚ್ಚಲು ತಲೆಯು ಬೇಡ, ಹೃದಯವೂ ಬೇಡ-ಕಲೆಯ ಬಗ್ಗೆ ಮೆಚ್ಚುಗೆ ಇದ್ದರೆ ಸಾಕೇ ಸಾಕು.

**ಕಲೋಪಾಸಕ** ಕಲೆಯನ್ನು ನಂಬಿ ಉಪವಾಸ ಬೀಳುವವನು.

**ಕವನ** ಭೂಗೋಳವನ್ನರಿಯದವನು ಚರಿತ್ರೆಗೆ ಕೈಹಾಕಬಾರದು. ಗಣಿತವನ್ನರಿಯದವನು ಖಗೋಳಕ್ಕೆ ಕೈ ಹಾಕಬಾರದು. ಏನೂ ಅರಿಯದವನು ಕವನಕ್ಕೆ ಕೈಹಾಕಬಹುದು ; "ಕಳ್ಳರು ನನ್ನ ಪೆಟ್ಟಿಗೆಯನ್ನು ಕದ್ದೊಯ್ದರು" ಎಂದೊಬ್ಬ ಕವಿ ಗೋಳಾಡಿದ. "ನಿನ್ನ ಗತಿ ಏನಯ್ಯ, ಪಾಪ !" ಎಂದು ತಿಂಮ ಮರುಗಿದ. "ಅದರ ತುಂಬ ನನ್ನ ಕವನಗಳಿದ್ದವು" ಎಂದು ಕವಿ ಮರುಗಿದ. "ಅವನ ಗತಿ ಏನಯ್ಯ, ಪಾಪ !" ಎಂದು ತಿಂಮ ಗೋಳಾಡಿದ.

**ಕವಿ** ಹುಚ್ಚರ ಮೆಚ್ಚುಗೆ ಪಡೆಯುವ ಹಿರಿಹುಚ್ಚ ; ಸಾಕ್ಷಾತ್ ಸರಸ್ವತಿಯ ಏಕಮಾತ್ರ ಗುರು ತಾನೇ ಎಂದುಕೊಳ್ಳದ ಕವಿಯನ್ನು ಕಾಣಲು ಸಾಧ್ಯವೇ ? ಗದ್ಯವನ್ನು ಕೆಡಿಸುವವನೇ ಕವಿ ; ಪ್ರಣಯದ ಹುದುಲಲ್ಲಿ

ಸಿಕ್ಕವರೆಲ್ಲರೂ ಕವಿಗಳೇ ; ರವಿ ಕಾಣದ್ದನ್ನು ಕವಿ ಕಾಣುತ್ತಾನೆ. ಉದಾ : ಕತ್ತಲು ; ಕಪಿ ಕಾಮುಕ ಮತ್ತು ಹುಚ್ಚ ಈ ಮೂವರಲ್ಲಿಯೂ ಭಾವನಾ ಶಕ್ತಿಯು ಅತ್ಯದ್ಭುತವಾಗಿರುತ್ತದಂತೆ - ಕಾಮುಕ ಮತ್ತು ಹುಚ್ಚರಿಂದ ಮಾತ್ರ ಪಾರಾಗಲು ಕಾಯಿದೆಯ ಸಹಾಯವಿದೆ ; ಹೊಟ್ಟೆಗೆ ಹಿಟ್ಟು ಇಲ್ಲದವನು, ಹೆಂಣು ಕೈಕೊಟ್ಟವನು ಉತ್ತಮ ಕವಿಗಳಾಗುತ್ತಾರೆ; ಕವಿಯು ಅಲ್ಲಿಲ್ಲಿ ಉದಯಿಸುತ್ತಾನೆ - ಕಾಲೇಜಿನ ಕುಲುಮೆಗಳಲ್ಲಿ ಮಾಡಲ್ಪಡುವುದಿಲ್ಲ; ಕವಿಗಳಲ್ಲಿ ಎರಡು ಜಾತಿ - ಉದ್ದಾಮ ಕವಿ ಮತ್ತು ಮುದ್ದಾಂ ಕವಿ - ಜನರು ಉದ್ದಾಮ ಕವಿಯ ಬೆನ್ನು ಹತ್ತುತ್ತಾರೆ - ಮುದ್ದಾಂ ಕವಿ ಜನರ ಬೆನ್ನುಹತ್ತುತ್ತಾನೆ; ಸಾವಿರ ಸರಸ್ವತಿಯರಿಗೂ ಹರಿಶ್ಚಂದ್ರನನ್ನು ಕವಿಯನ್ನಾಗಿ ಮಾಡಲು ಸಾಧ್ಯವಿರಲಿಲ್ಲ - ಅವನಿಗೆ ಸತ್ಯದ ಹುಚ್ಚು ಹಿಡಿದಿದ್ದಿತು ; ಎಲ್ಲವನ್ನು ಸೃಜಿಸಿದ ದೇವನಿಗೆ ಒಂದು ಮಾತ್ರ ಆಗಲಿಲ್ಲ - ಮುಖಸ್ತುತಿ ಒಲ್ಲೆ ಎನ್ನುವ ಕವಿ ; ಸತ್ತ ಕವಿಯೇ ಉತ್ತಮ ಕವಿ - ಈಗ ಅವನು ಏನನ್ನೂ ಬರೆಯುತ್ತಿಲ್ಲ.

**ಕವಿತೆ** ಕವಿತೆಯ ಮೂಲವನ್ನು ಹುಡುಕಬೇಡ-ಭಾಷಾಂತರವು ಅಷ್ಟು ಚೆನ್ನಾಗಿ ಆಗಿರುವುದಿಲ್ಲ ; ನೋವಿನಲ್ಲಿ ಹುಟ್ಟಿದುದೆ ಕವಿತೆ ; ರಸವಿಲ್ಲದ ಕವಿತೆ ಹುಳು ಇಲ್ಲದ ಗಾಳದಂತೆ, ತಲೆ ಇಲ್ಲದ ಟೊಪ್ಪಿಗೆಯಂತೆ, ಹಣವಿಲ್ಲದ ಶ್ರೀಮಂತನಂತೆ, ನೀರಿಲ್ಲದ ನಲ್ಲಿಯಂತೆ, ಬೀರಿಲ್ಲದ ಬೆಂಗಳೂರಿನಂತೆ; ಗದ್ಯವನ್ನು ಬರೆಯಲು ಬಾರದವನಿಗೆ ಕವಿತೆಯೇ ಗತಿ; ಅನೇಕ ಒಳ್ಳೆಯ ಮನುಷ್ಯರೂ ಕೆಟ್ಟ ಕವಿತೆಗಳನ್ನು ಬರೆದಿದ್ದಾರೆ - ಒಬ್ಬ ಕೆಟ್ಟ ಮನುಷ್ಯನೂ ಒಳ್ಳೆಯ ಕವಿತೆಯನ್ನು ಬರೆದುದಿಲ್ಲ.

**ಕವಿವಾಣಿ** ಕವಿವಾಣಿಯೇ ಹಸು ಎನ್ನುತ್ತಾರೆ ಹಲವರು - ಹಾಲು ಕೊಡದಿದ್ದರೂ ಗೊಬ್ಬರವನ್ನಂತೂ ಕೊಡುತ್ತಿದೆಯಲ್ಲ ಹೇರಳವಾಗಿ.

**ಕಷ್ಟ** ಕಷ್ಟವನ್ನು ಅರಿಯದವನು ತನ್ನನ್ನೇ ತಾನು ಅರಿತಿಲ್ಲ ; ಕಷ್ಟವು ಕಷ್ಟವೇ ಅಲ್ಲ - ಆದರಿಂದ ಇನ್ನೊಂದು ಹೊಸ ಕಷ್ಟವು ಬರದಿದ್ದರೆ; ಕಷ್ಟವು ಮುಚ್ಚಿದ ಕದವನ್ನು ತೆರೆದು ಒಳಬರುವುದಿಲ್ಲ - ಅದಕ್ಕಾಗಿ ತೆರೆದಿಟ್ಟ ಬಾಗಿಲಿಂದಲೇ ಬರುತ್ತದೆ ; ವಿವೇಕಿಗೆ ಕಷ್ಟವೇ ಒಳ್ಳೆಯ ಗುರು ; ದೇವನ ದಯೆ ಎಂಬ ಮಹಾ ವೃಕ್ಷದ ಬೀಜಕ್ಕೆ ಕಷ್ಟವೆಂದು ಹೆಸರು ; ಚಿಕ್ಕಪುಟ್ಟ ಕಷ್ಟಗಳು ಹೇಳಿಕೊಡರೆ ಹಗುರಾಗುತ್ತವೆ, ದೊಡ್ಡವು ಅನುಭವಿಸಿದರೆ ಹೋಗುತ್ತವೆ - ಕಷ್ಟವೆಲ್ಲಿದೆ ?

**ಕಷ್ಟದ ಕೆಲಸ** ಉತ್ಸಾಹವಿಲ್ಲದೆ ಮಾಡುವ ಅತಿ ಸುಲಭದ ಕೆಲಸಕ್ಕೆ ಬಹು ಕಷ್ಟದ ಕೆಲಸವೆಂದು ಹೆಸರು.

**ಕಹಿ** ಪಕ್ವವಾಗುವ ಮುಂಚೆ ಅಮೃತವೂ ಕಹಿಯೆ.

**ಕಳ್ಳ** ಕೈಗೆ ಸಿಕ್ಕವನೇ ಕಳ್ಳ; ಕಳ್ಳನ ಮಕ್ಕಳು ಕಳ್ಳರೇ ಆಗುತ್ತಾರೆ-ಸಂಪನ್ನನ ಮಕ್ಕಳು ಸಂಪನ್ನ ರಾಗುವುದಿಲ್ಲ; ಸಂಬಳವಿಲ್ಲದ ಗೌರವ ಹುದ್ದೆಗಳು ಕಳ್ಳರನ್ನು ಸೃಷ್ಟಿಸುತ್ತವೆ ; ಪ್ರಾಯದ ಮಗನಿದ್ದವನು ಇನ್ನೊಬ್ಬನಿಗೆ ಕಳ್ಳ ಎನ್ನಬಾರದು-ಪ್ರಾಯದ ಮಗಳಿದ್ದ ವಳು ಇನ್ನೊಬ್ಬಳಿಗೆ ವ್ಯಭಿಚಾರಿ ಎನ್ನಬಾರದು ; ಎಲ್ಲ ಕಳ್ಳರು ಕತ್ತಲಲ್ಲಿಯೇ ಇರುವುದಿಲ್ಲ, ಬೆಳಕಿನಲ್ಲಿಯೇ ಹೆಚ್ಚು ಕಳ್ಳರಿರುತ್ತಾರೆ. ಕಛೇರಿಗಳಲ್ಲಿ ಕುರ್ಚಿಯ ಮೇಲೆ, ಸರಕಾರದಲ್ಲಿ ಗಾದಿಯ ಮೇಲೆ, ಸಮಾಜ ದಲ್ಲಿ ಉದ್ಧಾರಕರಾಗಿ, ಗುಡಿಯಲ್ಲಿ ಅರ್ಚಕರಾಗಿ, ಮಠದಲ್ಲಿ ಸ್ವಾಮಿಯಾಗಿ, ಮೈದಾನದಲ್ಲಿ ಭಾಷಣ

ಬರಲಿ ಎಂದು ಕಾದು ಕುಳಿತವನು ಕಾಲವು ಬಂದು ಮುಂದು ಹೋದ ನಂತರವೂ ಹಾಗೆಯೇ ಕುಳಿತೇ ಇರುತ್ತಾನೆ.

**ಕಾಲು** ಕತ್ತೆಗೆ ಕೋಡು ಇಲ್ಲ, ಸೊಂಡಿಲೂ ಇಲ್ಲ, ಹೋಗಲಿ ಕಾಲೂ ಇರದಿದ್ದರೆ ಗತಿ ! ಕಷ್ಟ ಬಂದಾಗ ಮಾನವನಿಗೆ ಹಿಡಿಯಲು ಬೇಡವೆ ?

**ಕಾಲೇಜು** ಕೆಲವು ವಿದ್ಯಾರ್ಥಿಗಳಿಗೆ ತಮ್ಮ ಕಾಲೇಜಿನ ಮೇಲೆ ಅತೀವ ಅಭಿಮಾನ - ಪಾಸುಮಾಡಿ ಕಾಲೇಜಿನಿಂದ ಹೊರ ಹೋಗಲಿಕ್ಕೇ ಒಲ್ಲರು.

**ಕಾವ್ಯಕನ್ನೆ** ಮೇಘಕೇಸಿ, ಚವತಿಚಂದ್ರ ಲಲಾಟ, ಕಸ್ತೂರಿ ತಿಲಕ, ಮದನ ಧನಸ್ಸು ಭ್ರೂ, ಮೀನ ನೇತ್ರಿ, ತಿಲಪುಷ್ಪ ನಾಸಿಕ, ದರ್ಪಣ ಕಪೋಲ, ಕುಂದ ರದನ,



ಬಿಂಬಾಧರೀ, ಶ್ರೀಕರ್ಣ, ಪೂರ್ಣಚಂದ್ರ ವದನ, ಶಂಖಕಂಠಿ, ಶೇಷ ಹಸ್ತ, ಸುವರ್ಣ ಕಲಶಸ್ತನೀ, ಶೂನ್ಯ ಮಧ್ಯ, ಗಂಭೀರಾವೃತ್ತನಾಭಿ, ವಿಶಾಲ ಜಘನ, ಸೈಕತ ಶ್ರೋಣಿ, ಕದಳೀ ಸ್ತಂಭೋರುಯುಗಳ, ಪಾದಪದ್ಮ, ವಜ್ರನಖ, ಹಂಸಗಮನ, ಅಭಿನಯ ಹಸ್ತ, ತ್ರಿಭಂಗಿ.

**ಕಾವಿ** ಕಾವಿಯನ್ನು ಧರಿಸಿದ ಕಾಮಿಯಕ್ಕಿಂತಲೂ ಕುರಿಯ ಚರ್ಮವನ್ನು ಧರಿಸಿದ ತೋಳವೇ ಮೇಲು.

**ಕಿರಿಮಗ** ಕಿರಿ ಕಿರಿ ಮಾಡುವ ಮಗ ; ಹಿರಿಮಗ ನೋಡಿರಿ

**ಕಿರೀಟ** ಕಿರೀಟದಿಂದ ತಲೆ ನೋವು ಹೋಗುವುದಿಲ್ಲ. ಟೊಪ್ಪಿಗೆಯಿಂದ ಬುದ್ಧಿ ಬರುವುದಿಲ್ಲ.

**ಕಿವಿ** ಕಿವಿಯಕ್ಕಿಂತಲೂ ಕಣ್ಣಿನ ಮೇಲೆ ಹೆಚ್ಚು ಭರವಸೆ ಇಡುವವನೇ ಜಾಣ.

**ಕಿವುಡ** ಹಸಿದ ಹೊಟ್ಟೆಗೆ, ಉಕ್ಕುವ ಪ್ರಾಯಕ್ಕೆ ಇರುವಷ್ಟು ಕಿವುಡು ಯಾವ ಕಲ್ಲಿಗೂ ಇಲ್ಲ.

**ಕ್ರಿಶ್ಚಿಯನ್** ಆರು ದಿನಗಳು ಮಾಡಿದ ಹಳೆಯ ಪಾಪಗಳಿಗಾಗಿ ಆದಿತ್ಯವಾರ ಪಶ್ಚಾತ್ತಾಪ ಪಟ್ಟು, ಹೊಸ ಪಾಪಗಳಿಗೆ ಪರ್ಮಿಟ್ಟು ಪಡೆಯುವ ಪುಣ್ಯಾತ್ಮ.

**ಕೀರ್ತಿ** ಬೆನ್ನು ಹತ್ತಿದರೆ ದಾರಿ ತಪ್ಪಿಸುತ್ತದೆ. ಬೇಡವೆಂದು ಕಾಲಿನಿಂದ ಒದೆದರೆ ಬೆನ್ನು ಹತ್ತುತ್ತದೆ. ಶುಧ್ಧ ವ್ಯಭಿಚಾರಿ - ಇದ್ದವರನ್ನು ಬಿಟ್ಟು, ಇನ್ನೊಬ್ಬನಲ್ಲಿ ಹೋಗಲು ಅನುಗಾಲವೂ ಇದಕ್ಕೆ ಆತುರ ; ಸತ್ತವನು ತಿನ್ನುವ ಆಹಾರ ; ಇದನ್ನು ಗಳಿಸಲು ಮೊದಲು ಕಷ್ಟ, ನಂತರ ಉಳಿಸಲು ಕಷ್ಟ, ಕಳೆದುಕೊಂಡರಂತೂ ಕಡೆಯವರೆಗೂ ಕಷ್ಟ ; ಹೆಚ್ಚು ಇದ್ದಂತೆಲ್ಲ ಕಳೆದುಕೊಳ್ಳುವ ಸಂಭವವೇ ಹೆಚ್ಚು.

**ಕುಕ್ಕರ್** ನಾಲ್ವರು ಪುರುಷರು ಮಾಡುವಷ್ಟು ಕೆಲಸವನ್ನು ಅದೊಂದೆ ಮಾಡುತ್ತದೆ - ಅರ್ಥಾತ್ ಓರ್ವ ಸ್ತ್ರೀ ಮಾಡುವಷ್ಟು ಅಷ್ಟಿ ; ಕುಕ್ಕರ್ ಕೊಂಡ ಮೇಲೂ ಲಗ್ನವಾಗುವವನು ಶತಮೂರ್ಖ !

**ಕುಚ** ಕೆಟ್ಟ ಚಹಾ

**ಕುಚಾ** ಕುಚೇಲನ ತಾಯಿ ಅವನನ್ನು ಹೀಗೆ ಕೂಗಿ ಕರೆಯುತ್ತಿದ್ದಳಂತೆ

**ಕುಡಿ** ಕೊಂಚ ಕುಡಿದು ಕೂಡುವದಕ್ಕಿಂತಲೂ, ಕುಡಿಯದೆ ಮಲಗುವುದು ಹೆಚ್ಚು ಸುಲಭ ; ಕುಡಿತವಿಲ್ಲದೆ ಮನಸ್ಸು ಹಾಳು ಮಾಡಿಕೊಳ್ಳುವ ಬದಲು ಕುಡಿದು ದೇಹವನ್ನು ಹಾಳು ಮಾಡಿಕೊಳ್ಳುವುದು ಒಳಿತು. ಬಾಯಾರಿಕೆ ಎಲ್ಲ ಪ್ರಾಣಿಗಳಿಗೂ ಆಗಬಹುದು - ಕುಡಿತ ಬೇಕಾಗುವುದು ಮನುಷ್ಯನೆಂಬ ಮೃಗಕ್ಕೆ ಮಾತ್ರವೇ ; ನಿನಗೆಷ್ಟು ಹಿತವ್ರೋ ಅದಕ್ಕೂ ಹೆಚ್ಚು ಕುಡಿಸುವವನು ನಿನ್ನ ಗೆಳೆಯನಲ್ಲ - ನಿನ್ನ ಕಾಯಿಲೆಯ ಗೆಳೆಯ ; ಇಟ್ಟು ಕುಡಿಯಬೇಡ ; ಬಿಟ್ಟು ಕುಡಿಯಬೇಡ ; ನೆಲಕ್ಕೆ ಬೀಳುವಷ್ಟು ಕುಡಿಯಲಾರದವನಿಗೆ ಕುಡಿಯುವ ಅಧಿಕಾರವನ್ನು ಕೊಟ್ಟ ಮೂರ್ಖನಾರು ? ಮಗನು ಉಂಡರೆ ಕೇಡಲ್ಲ - ಗಂಡನು ಕುಡಿದರೆ ಕೇಡಲ್ಲ. ಹೆಚ್ಚು ಬಾರಿ ಹೆಚ್ಚೆಚ್ಚು ಕುಡಿದವನು ಎಂದಿಗಾದರೂ ಕುಡಿಯುವುದನ್ನು ಬಿಟ್ಟಾನು. ಒಂದು ತಪ್ಪಿಗೆ ಒಂದೇ ಶಿಕ್ಷೆ - ಕುಡಿದು ಮಾಡಿದ ತಪ್ಪಿಗೆ ಎರಡು ಶಿಕ್ಷೆ.

**ಕುಡುಕ** 'ಕಾಲು ಜಾರದವನು ಯಾವನು' ಎಂದನಂತೆ ಗಟಾರದಲ್ಲಿ ಬಿದ್ದು ಬಡಬಡಿಸುತ್ತಿದ್ದ ಓರ್ವ ಕುಡುಕ. ಕುಡಕರಲ್ಲಿಯೂ ಎರಡು ಜಾತಿ - ಅವೇ ಬೇಕು,

ಇದೇ ಬೇಕು ಎಂಬುದೊಂದು, ಯಾವುದಾದರೂ ಸರೆ, ಬೇರೆಯವರದಾದರಾಯಿತು ಎಂಬುದಿನ್ನೊಂದು; ಮಾನವನು ಮಗುವಾಗಬೇಕೆಂದು ಬಯಸಿದಾಗಲೆಲ್ಲ ಕುಡುಕನಾಗುತ್ತಾನೆ - ಕುಡಿದ ಮೇಲೆ ಕತ್ತೆಯಾಗುತ್ತಾನೆ ; ಕುಡುಕನು ಕರೆದ ಕೂಡಲೇ ದೇವನು ಬರುತ್ತಾನೆ - ಕರೆದುದೇಕೆಂದು ನೆನಪು ಮಾಡಿಕೊಳ್ಳುವ ಮೊದಲೇ ಮಾಯವಾಗುತ್ತಾನೆ ; ಕುಡುಕನು ಹೆಚ್ಚು ಎಚ್ಚರವಾಗಿರುವುದು ಕುಡಿವಾಗಲೆ; ಕೊಂಚ ಕುಡಿದವನು ಹೆಂಣು ಬೇಡುತ್ತಾನೆ - ಹೆಚ್ಚು ಕುಡಿದವನು ಹಾಸಿಗೆ ಹುಡುಕುತ್ತಾನೆ; ಕುಡುಕನೊಬ್ಬನಿಗೆ ಡಾಕ್ಟರನು ಹೇಳಿದರಂತೆ , 'ನೀನು ಈ ತಕ್ಷಣವೇ ಕುಡಿಯುವುದನ್ನು ನಿಲ್ಲಿಸದಿದ್ದರೆ ನಿನ್ನ ಕಂಣು ಕುರುಡಾಗುತ್ತದೆ' ಎಂದು - ಆಗ ಆ ಕುಡುಕ ಕರುಣೆಯಿಂದ ನುಡಿದನಂತೆ 'ಅಯ್ಯೋ ಬೆಳಕೆ ! ನಿನ್ನದು ಅದೆಂತಹ ದುರ್ದೈವ, ಇನ್ನು ಮೇಲೆ ನನ್ನ ಕಂಣಿಗೆ ನೀನು ಬೀಳಲಾರಿ. ಹೋಗಿ ಬಾ, ಅಯ್ಯೋ ಪಾಪಿ !

**ಕುಡುಕುತನ** ತಾತ್ಕಾಲಿಕ ಆತ್ಮಹತ್ಯ ; ತಾನು ಕುಡಿಯದಿರುವಾಗ ಕುಡಿದವನನ್ನು ನೋಡುವುದೇ ಕುಡುಕುತನಕ್ಕೆ ಔಷಧಿ ; ಕುಡುಕುತನದಿಂದ ತಪ್ಪುಗಳು ಆಗುವುದಿಲ್ಲ - ಹೊರಬರುತ್ತವೆ, ಅಷ್ಟೆ ; ಕುಡುಕುತನ ಎಂದಿಗೂ ಪಾಪವಲ್ಲ, ಪಾಪದ ಫಲ ಮಾತ್ರ ; ಕುಡುಕುತನವನ್ನೇ ಅರಿಯದವನಕ್ಕಿಂತಲೂ ಕುಡಿಕುಡಿದು ಕಡೆಗೆ ಬಿಟ್ಟವನು ಹೆಚ್ಚು ಸುಖಿ !

**ಕುದುರೆ** ಕರೀ ಕುದುರೆ ಕತ್ತೆಯಂತೆ ಕಾಣಬಹುದು, ಬಿಳೀ ಕುದುರೆ ! ಇದನ್ನು ಕುಡಿದವನು ಸಾಕ್ಷಾತ್ ಕತ್ತೆಯೇ ಆಗುತ್ತಾನೆ.

**ಕುಪಿತ** ಕೆಟ್ಟ ತಂದೆ.

**ಕುಬೇರ** ಕೆಟ್ಟ ಬೇರಿನಿಂದ ಹುಟ್ಟಿದವನು.

**ಕುರಿ** ನಾನೊಂದು ಕುರಿ ಎಂದಂದುಕೊಂಡು ನೋಡು, ನಿನ್ನ ನೆಳಲೇ ತೋಳವಾಗಿ ನಿನ್ನನ್ನು ತಿನ್ನುತ್ತದೆ.

**ಕುರುಡ** ಒಬ್ಬ ಕುರುಡನಿಗೆ ಔತಣ ಕೊಟ್ಟರೆ ಇಬ್ಬರಿಗೆ ಹೇಳಿದಂತೆಯೆ - ಕೈಹಿಡಿದು ಇನ್ನೊಬ್ಬ ಬರುತ್ತಾನೆ; 'ಆಗಲಿ ನೋಡೋಣ' ಎಂದನಂತೆ ಕುರುಡ.

**ಕುಲ** ಕುಲವು ಕೆಟ್ಟರೂ ಸುಖವು ದೊರೆಯಲಿಲ್ಲ ಎನ್ನುವ ದಡ್ಡರೂ ಇದ್ದಾರೆ - ಕುಲ ಕೆಡುವುದೇನು ಸಾಮಾನ್ಯ ಸುಖವೇ ?

**ಕುಸ್ತಿ** ಬೆಕ್ಕು ಸಾಧುವಾದರೆ ಇಲಿಯೇ ಅದನ್ನು ಕುಸ್ತಿಗೆ ಕರೆಯುತ್ತದೆ.

**ಕುಸುಮ** ಕೆಟ್ಟ ಹೂ

**ಕೂದಲು** ಅನೇಕರಿಗೆ ಕೂದಲು ಉದುರುವುದಕ್ಕೆ ಒಂದೇ ಕಾರಣ, ಚಿಂತೆ - ಅವರಿಗೆಲ್ಲ ಒಂದೇ ಚಿಂತೆ, ಕೂದಲು ಉದುರುತ್ತಿರುವುದು.

**ಕೂಲಿ** ಕೂಲಿ ಬೇಡದೆ ಕೆಲಸ ಮಾಡುವವನು ನಾಲಿಗೆ ಇಲ್ಲದೆ ರುಚಿ ನೋಡಬೇಕಾಗುತ್ತದೆ.

**ಕೂಸು** ಇಂದು ಹುಟ್ಟಿರುವ ನನ್ನ ಕೂಸು ನನಗಾವ ಉಪಕಾರ ಮಾಡಿದೆಯೆಂದು ನಾನು ಪೋಷಿಸಲಿ ಎಂದು ತಾಯಿ ಅನ್ನುತ್ತಾಳೆಯೇ ? - ಹುಟ್ಟುವುದೇ ಕೂಸು ಮಾಡುವ ಉಪಕಾರ.

**ಕೂಳುಬಾಕ** ತನ್ನ ಹಲ್ಲಿನಿಂದಲೆ ತನ್ನ ಗೋರಿಯನ್ನು ತೋಡಿ ಕೊಳ್ಳುವವನು ; ಕೂಳುಬಾಕನಿಗೆ ಅಡುಗೆ ಮನೆಯೇ

ದೇವಾಲಯ, ಅಡುಗೆಯವನೇ ಪೂಜಾರಿ, ಎಲೆಯ ಮುಂದೆ ಕೂಡುವುದೇ ಹೋಮ, ಹೊಟ್ಟೆಯೇ ಅವನ ದೇವರು.

**ಕೂಳುಬಾಕತನ** ಕೂಳುಬಾಕತನವು ಕೊಂದಷ್ಟು ಜನರನ್ನು ಯಾವ ಯುದ್ಧವೂ ಕೊಂದಿಲ್ಲ.

**ಕೃತಘ್ನ** ನಮಗಿಂತಲೂ ಉಚ್ಚ ಸ್ಥಿತಿಗೆ ಬಂದವರಿಗೆ ನಾವು ಕೊಡುವ ಹೆಸರು.

**ಕೃತಘ್ನತೆ** ಕತ್ತೆ, ನಾಯಿ ಮುಂತಾದ ಕೀಳು ಪ್ರಾಣಿಗಳು ಕೇವಲ ಮನುಷ್ಯ ವರ್ಗಕ್ಕೆ ಮೀಸಲಾಗಿ ಬಿಟ್ಟುಕೊಟ್ಟಿರುವ ಒಂದು ಅತ್ಯುತ್ತಮ ಸದ್ಗುಣ ; ಕೂಡಲೇ ಪ್ರತ್ಯುಪಕಾರ ಮಾಡುವುದೂ ಒಂದು ಬಗೆಯ ಕೃತಘ್ನತೆಯೇ, ಕೃತಘ್ನತೆಗೆ ಶಿಕ್ಷೆ ಕಾಯಿದೆಯಲ್ಲಿಲ್ಲ - ಅದನ್ನು ದೇವನೇ ಶಿಕ್ಷಿಸುತ್ತಾನೆ.

**ಕೃತ್ರಿಮದಂತ** ಕೃತ್ರಿಮದಂತವನ್ನು ಪಡೆದವನು ವಿಧವಾ ವಿವಾಹಕ್ಕೆ ಅಂಜಬೇಕಿಲ್ಲ.

**ಕೃಪಣ** ಶ್ರೀಮಂತನಾದ ಪಾಪರ್ ; ತನ್ನ ಹಣವನ್ನು ತಾನೇ ಕಳ್ಳತನ ಮಾಡುವವನು ; ಕೃಪಣನೂ ಜಗತ್ತಿಗೆ ಒಂದು ಮಹದುಪಕಾರವನ್ನು ಮಾಡುತ್ತಾನೆ - ಸತ್ತು? ತನ್ನ ಹೆಂಡತಿ ಮಕ್ಕಳನ್ನು ತಾನೇ ಪೋಷಿಸುತ್ತಾನೆ ಕೃಪಣ !

**ಕೃಷ್ಣಾಜಿನ** ಕೃಷ್ಣಾಜಿನದ ಮೇಲೆ ಕುಳಿತು ಪ್ರಾಣಿದಯಾಪ್ರಚಾರ ಮಾಡಬಹುದೇನು, ಸ್ವಾಮೀ ?

**ಕೆಟ್ಟವನು** ಒಬ್ಬನು ಇನ್ನೊಬ್ಬನ ಬಗ್ಗೆ ಪಡುವ ಅಭಿಪ್ರಾಯ ಅಷ್ಟೆ; ಒಳ್ಳೆಯವನು ನೋಡಿರಿ.

**ಕೆಟ್ಟ ಹೆಸರು** ಗಂಡನನ್ನು ಆಕರ್ಷಿಸಲು ಹೆಂಣಿಗೆ ಒಳ್ಳೆಯ ರೂಪಕ್ಕಿಂತಲೂ ಕೆಟ್ಟ ಹೆಸರೇ ಒಳ್ಳೆಯ ಸಾಧನ.

**ಕೆಡು** ಯೌವ್ವನದಲ್ಲಿ ತನ್ನನ್ನು ತಾನು ನಂಬಿ ಕೆಡುತ್ತಾನೆ - ವೃದ್ಧಾಪ್ಯದಲ್ಲಿ ಇತರರನ್ನು ಅನುಮಾನಿಸಿ ಕೆಡುತ್ತಾನೆ.

**ಕೆಡುಕು** ನಾನೇ ನನಗೆ ಮಾಡಿಕೊಂಡಷ್ಟು ಕೆಡುಕನ್ನು ಯಾವ ಶತ್ರುವೂ ಮಾಡಲಾರ ; ಬಾಯಿಂದ ಹೊರಬಿದ್ದ ಕೆಡುಕು ಮತ್ತೆ ಅವನ ಹೃದಯದಲ್ಲಿಯೇ ಬೀಳುತ್ತದೆ. ಸುಖದಲ್ಲಿರುವಾಗ ಮಾಡುವಷ್ಟು ಕೆಡುಕನ್ನು ಕಷ್ಟದಲ್ಲಿರುವಾಗ ಯಾವನೂ ಮಾಡಲಾರ.

**ಕೆಮ್ಮು** ಸುಳ್ಳು ಕೆಮ್ಮು ಸಂಗೀತವನ್ನು ಸೂಚಿಸುತ್ತದೆ. ಒಣ ಕೆಮ್ಮು ಸಾವನ್ನು ಸೂಚಿಸುತ್ತದೆ.

**ಕೆಲಸ** ಅನ್ನದಾತರು ಅನೇಕರು ಇರಬಹುದು - ಕೆಲಸವೇ ಏಕ ಮಾತ್ರ ಹಸಿವುದಾತ ; ಕೆಲಸವಿಲ್ಲದೆ ಸುಮ್ಮನೆ ಕುಳಿತವನ ಭುಜದ ಮೇಲೆ ಶನಿಯು ಕೂಡುತ್ತಾನೆ; ನಿನ್ನ ಕೆಲಸವು ಆಗಲೇಬೇಕಾದರೆ ಬಹು ಕೆಲಸವಿರುವವನ ಬಳಿ ಹೋಗು - ಕೆಲಸವಿಲ್ಲದವನಿಗೆ ಕೆಲಸ ಮಾಡಲು ಸಮಯವಿಲ್ಲ ; ಮೊದಲು ಹುಟ್ಟಿದುದು ನಿನ್ನ ಕೆಲಸ - ನಂತರ ನೀನು; ಮಾತು ಮಾನವನ ಮಗಳು - ಕೆಲಸ ದೇವನ ಮಗ ; ಕೆಲಸ ಮಾಡಲು ಒಲ್ಲದವನು ತತ್ವಜ್ಞಾನಿಯಾಗಲಿ ; ಐದು ಬೆರಳೂ ಸಮವಾಗಿಲ್ಲ, ನಿಜ - ಕೆಲಸವಿದ್ದಾಗ ಒಟ್ಟಿಗೆ ಸೇರುತ್ತವೆ.

**ಕೆಳಗೆ** ಎಲ್ಲರೂ ದೇವನಿಟ್ಟಲ್ಲಿಯೇ ಇರುತ್ತಾರೆ - ಕೆಲವರು ಮಾತ್ರ ಇನ್ನೂ ಕೆಳಗಿಳಿಯಲು ಹಾತೊರೆಯುತ್ತಾರೆ.

**ಕೇಶವರಾಯ** ಕೇಶರಾಶಿ ಉಳ್ಳರಾಯನೇ ಕೇಶವರಾಯ.

**ಕೇಳು** ಬೇಕಾದುದನ್ನು ಆಡುವವನು ಬೇಡಾದುದನ್ನು ಕೇಳಲೇಬೇಕು. ಕದ್ದು ಕೇಳುವವನು ಕೇಳಬಾರದುದನ್ನು ಕೇಳಲು ಸಿದ್ಧನಾಗಬೇಕು ; ಕೇಳಲು ಕಲಿಯದವನಿಗೆ ಹೇಳುವ ಅಧಿಕಾರ ಕೊಟ್ಟವರಾರು ?- ಒಂದೇ ನಾಲಗೆ, ಎರಡು ಕಿವಿ.

**ಕೈ** ಕೈ ಹಿಡಿದವರಿಗೆ ಕೈ ಕೊಡಬಾರದು ; ಕತ್ತು ಹಿಡಿದವನಿಂದ ಪಾರಾಗಬಹುದು - ಕೈಹಿಡಿದವಳಿಂದ ? ಹೆಂಣಿನ ಶಕ್ತಿಯೆಲ್ಲವೂ ಹೆಂಣಿನ ಕೈಯಲ್ಲಿಯೇ ಇದೆ · ಕೈ ಹಿಡಿದವನು ಬಾಯಿ ಬಿಡುವುದಿಲ್ಲರೇ ! ಬಾಲ್ಯದಲ್ಲಿ ಮಾಸ್ತರನು ಕಿವಿ ಹಿಡಿಯುತ್ತಾನೆ, ಯೌವ್ವನದಲ್ಲಿ ಹೆಂಡತಿ ಕೈ ಹಿಡಿಯುತ್ತಾಳೆ, ವೃದ್ಧಾಪ್ಯದಲ್ಲಿ ಮಕ್ಕಳು ಕಾಲು ಹಿಡಿಯುತ್ತವೆ, ಇವೆಲ್ಲವುಗಳ ಪರಿಣಾಮವಾಗಿ ತಾನೇ ಮೂಗು ಹಿಡಿದುಕೊಳ್ಳುತ್ತಾನೆ ; ಮುಂದಿನ ಎರಡು ಕಾಲುಗಳನ್ನು ಕೈಯಾಗಿ ಉಪಯೋಗಿಸುವ ಕೆಲವು ಮೃಗಗಳಿಗೆ ಮನುಷ್ಯ ಎನ್ನುವ ವಾಡಿಕೆ ಇದೆ ; ಬಲಗೈ ಮಾಡುತ್ತಿರುವುದು ಎಡಕೈಗೆ ತಿಳಿಯಬಾರದು ಎಂಬುದು ದೊಡ್ಡವರಾಡಿದ ಮಾತು - ಅದೂ ಊಟ ಮಾಡಲು ಸುರು ಮಾಡಿದರೆ !

**ಕೈಕೇಯಿ** ರಾಮಾಯಣವನ್ನು ಸುಳ್ಳೆಂದು ಹೇಳುವ ಧೈರ್ಯವಿದ್ದವನು ಮುಪ್ಪಿನಲ್ಲಿ ಚಿಕ್ಕ ಮಡದಿಯನ್ನು ಮದುವೆಯಾಗಿ ನೋಡಲಿ.

**ಕೊಡ** ತುಬಿದ ಕೊಡ ತುಳುಕುವುದಿಲ್ಲ ಎಂಬುದು ದೊಡ್ಡವರಾಡುವ ದಡ್ಡ ಮಾತು - ಬರೀ ಕೊಡ ? ಚಿಕ್ಕದಿದ್ದರೆ ಕೊಡ, ದೊಡ್ಡದಿದ್ದರೆ ಖೊಡ, ಇನ್ನೂ ದೊಡ್ಡದಿದ್ದರೆ ಖೊಢಾ, ಇನ್ನೂ ದೊಡ್ಡದಿದ್ದರೆ ಖೊಢಘಾನ್ಸ, ತೀರ ಚಿಕ್ಕದು ಕೊಡಪಾನ.

**ಕೊಡು** ಕೊಡದವನಿಗೂ, ಬಹುಬೇಗ ಕೊಡುವವನಿಗೂ ಹೆಚ್ಚು ಭೇದವಿಲ್ಲ – ಸಮಯಕ್ಕೆ ಈರ್ವರದೂ ಇಲ್ಲ ; ಕೊಂಚವೂ ಕೊಡಲಾರದವನು ಬಹಳ ಕೊಡುವ ವಾಗ್ದಾನ ಮಾಡುತ್ತಾನೆ ; ಬಾಗಿಲಿಗೆ ಬಂದು ಬೇಡಿದವನಿಗೆ ಕೊಡದವನು, ಕೆನ್ನೆಗೆ ಕೊಟ್ಟು ಕಸಿದುಕೊಳ್ಳುವವನನ್ನು ಹುಡುಕುತ್ತಾ ಹೋಗ ಬೇಕಾಗುತ್ತದೆ.

**ಕೊನೆ** ಜಗತ್ತಿನಲ್ಲಿ ಮೊದಲು ಹುಟ್ಟಿದವನು ರೈತ - ಕೊನೆಗೆ ಸಾಯುವವನು ಡಾಕ್ಟರ್.

**ಕೊಲೆ** ಒಂದು ಕೊಲೆ ಮಾಡುವ ಕೊಲೆಪಾತಕ ಗಲ್ಲು ಏರುತ್ತಾನೆ - ಸಾವಿರ ಕೊಲೆ ಮಾಡುವ ಶೂರ ಸಿಂಹಾಸನವೇರುತ್ತಾನೆ.

**ಕೋಣ** ಕೋಣನಿಗೆ ಸ್ವಾನುಭವವೂ ಸಾಲದು, ಜಾಣನಿಗೆ ಕೋಣನ ಅನುಭವವೇ ಸಾಕು ; ಕೋಣನಿಗೆ ಜಾಣ ಹೆಂಡತಿಯೇ ಪ್ರಾಯಶ್ಚಿತ್ತ - ಜಾಣಳಿಗೆ ಕೋಣ ಗಂಡನೇ ಬಹುಮಾನ.

**ಕೋತಿ** ಕೋತಿಯು ಕೂಡ ಮರದಿಂದ ಬೀಳುವುದುಂಟು.

**ಕೋಪ** ಅವರಿವರ ಮೇಲಿನ ಕೋಪವು ಮುಗಿದ ಮೇಲೆ ವಿವೇಕಿಗೆ ಇನ್ನೂ ಹೆಚ್ಚು ಕೋಪವು ಬರುತ್ತದೆ - ತನ್ನ ಮೇಲೆಯೇ ; ತಾತ್ಕಾಲಿಕ ಹುಚ್ಚಿಗೆ ಕೋಪವೆಂದು ಹೆಸರು.

**ಕೋರ್ಟು** ಕೋರ್ಟಿಗೆ ಹೋಗಿ ಹೋರಾಡಿದರೆ ನಿನ್ನ ಆಡು ನಿನಗೆ ಬರಬಹುದು. ಆದರೆ ಅದಕ್ಕಾಗಿ ನಿನ್ನ ಆನೆಯನ್ನು ಮಾರಲು ಸಿದ್ಧನಾಗಿರು.

**ಕೋಳಿ** ಕೋಳಿ ಕೂಗುವಾಗ ಕಣ್ಣು ಮುಚ್ಚಿಕೊಳ್ಳುತ್ತದೆ. ಆದಕ್ಕೆ ಎಲ್ಲವೂ ಬಾಯಿಪಾಠ ! ತಾನು ಕೂಗಿದುದಕ್ಕಾಗಿಯೇ ಸೂರ್ಯನು ಹುಟ್ಟಿದನೆಂದು ತಿಳಿಯುವ ಜಂಭದ ಕೋಳಿ ; ತತ್ತಿಯಾಗಿದ್ದಾಗ ಉಳಿದುಕೊಂಡ ತಪ್ಪಿಗಾಗಿ ಕೋಳಿಯಾಗಿ ಕೊಲ್ಲಿಸಿಕೊಳ್ಳುತ್ತದೆ.

**ಕೋಳೀಮರ್ಧನ** ಮುಲ್ಲಾ ಸಾಬಿ.

**ಕಂಣೀರು** ಕಣ್ಣಿದ್ದ ಗಂಡನ್ನು ಕುರುಡು ಮಾಡಲು ಹೆಣ್ಣು ಉಪಯೋಗಿಸುವ ಸಾಮಾನ್ಯ ಅಸ್ತ್ರ; ಕಣ್ಣೀರಿ ಗಿಂತಲೂ ಬೇಗ ಒಣಗುವುದು ಮತ್ತಾವುದಿದೆ ? ಕಂಣೀರು ಸ್ವರ್ಗದ ಬಾಗಿಲನ್ನು ತೆಗೆಯಿಸಬಲ್ಲುದು - ಗಂಡನ ಹೃದಯವನ್ನು ? ಹೆಂಣಿನ ಕಣ್ಣೀರಿಗೆ ಗಂಡು ಮಣಿಯುವಂತಿದ್ದರೆ ಹೊಲಗದ್ದೆಗಳಿಗೆ ಕೆರೆ ನದಿಗಳ ನೀರೇಕೆ ಬೇಕಾಗುತ್ತಿತ್ತು.

**ಕಂಣು** ಕಣ್ಣಿನಿಂದ ಒಂದೇ ಒಂದು ಬಹು ದೊಡ್ಡ ಉಪಯೋಗವಿದೆ - ಬೇಡವಾದಾಗ ಮುಚ್ಚಿಕೊಳ್ಳ ಬಹುದು ; ಕಣ್ಣಿಲ್ಲದವನೇ ಹೆಚ್ಚು ಕಣ್ಣೀರು ಸುರಿಸುತ್ತಾನೆ ; ಕಂಣು ತನ್ನನ್ನು ಮಾತ್ರ ನಂಬುತ್ತದೆ, ಕಿವಿ ಎಲ್ಲರನ್ನೂ ನಂಬುತ್ತದೆ - ಕಣ್ಣಿಗಿರುವಷ್ಟು ಬುದ್ಧಿ ಕಿವಿಗೆಲ್ಲಿ ಬರಬೇಕು ? ಗಂಡಿಗೆ ಕಂಣು ಇದೆ - ಆದರೆ ಹೆಂಣಿಗೆ ದೃಷ್ಟಿ ಇದೆ.

**ಕಂತುಪಿತ** ಕಂತಿನ ಮೇಲೆ ಹಣವನ್ನು ವಸೂಲು ಮಾಡುವವನು.

**ಕಂಬನಿಸಭೆ** ಐವತ್ತು ಜನರಾದರೂ ಸೇರಲೇಬೇಕಾದರೆ ಐದು ನೂರು ಜನರಿಗೆ ಕರೆ ಕಳಿಸು - ಇಲ್ಲವಾದರೆ ಚಹಾ

ಮತ್ತು ನೃತ್ಯವನ್ನೇರ್ಪಡಿಸಿ ಗುಟ್ಟಗಿ ಐದೇ ಜನರಿಗೆ ತಿಳಿಸು.



**ಕಾಂತಾ ಸಂಮಿತ** ಕಿವಿ ಹಿಂಡಿ ನಂತರ ಹೇಳುವುದು ಪಿತೃ ಸಂಮಿತ, ಕಿವಿ ಹಿಂಡದೆ ಹೇಳುತ್ತಲಿರುವುದು ಮಾತೃ ಸಂಮಿತ, ಏನೂ ಹೇಳದೆ ಕಿವಿ ಹಿಂಡುತ್ತಲಿರುವುದು ಕಾಂತಾ ಸಂಮಿತ.

**ಕ್ರಾಂತಿ** ಕ್ರಾಂತಿಯ ಕೊನೆಗೆ ಶಾಂತಿಯೇ ಬರುವುದೆಂದು ಹೇಳಲಾಗದು-ಇನ್ನೊಂದು ಕ್ರಾಂತಿಯೇ ಕಾದಿದ್ದರೆ ?

**ಕುಂಭಕರ್ಣ** ಪಕ್ಕದ ಮನೆಯಲ್ಲಿ ಮದುವೆ ಸಂಗೀತ ಕಲಿಯುವ ಕನ್ಯೆ ಇದ್ದರೂ ತನ್ನ ಮನೆಯಲ್ಲಿ ಸುಖವಾಗಿ ನಿದ್ರಿಸಬಲ್ಲ ಪುಣ್ಯಾತ್ಮ.



**ಖಡ್ಗ** ಯೋಧನ ಕೈಯ ಖಡ್ಗಕ್ಕಿಂತಲೂ ಪಂಡಿತನ ಕೈಯ ಲೇಖಣಿಕೆಗೆ ಶಕ್ತಿ ಹೆಚ್ಚು. ಆದರೆ ಹೆಂಡತಿಯ ಕೈಯ ಕಸಬರಿಕೆ ಇವೆರಡನ್ನೂ ಓಡಿಸುತ್ತದೆ ; ಖಡ್ಗದ ಪೆಟ್ಟು ಎಮಿಕೆಯವರೆಗೂ
ಕಾಸಿನ ಪೆಟ್ಟು ಒಳ ಎದೆವರೆಗೂ
ಕಾಮಿನಿ ಪೆಟ್ಟು ಮಸಣದವರೆಗೂ.





**ಗಡ್ಡ** ಪುರುಷಜಾತಿಗೆ ಮಾತ್ರವೇ ದೇವನು ದಯಪಾಲಿಸಿರುವ ಕಸ ; ಗಡ್ಡವೇ ದೊಡ್ಡತನದ ಗುರುತಾಗಿದ್ದರೆ ಮೇಕೆಯೇ ಮುಖ್ಯಮಂತ್ರಿಯಾಗಬೇಕಿತ್ತು. ತತ್ವಜ್ಞಾನಿಯ ಲಕ್ಷಣವೇ ಗಡ್ಡ ಎಂಬುದಾದರೇ ಪುರುಷರಿಗಿಂತಲೂ ಹೆಚ್ಚು ಗಡ್ಡ ಸ್ತ್ರೀಯರಿಗೇ ಬೆಳೆಯಬೇಕಿತ್ತು ; ಗಡ್ಡಬಿದ್ದವರೆಲ್ಲ ಠಾಗೋರರಲ್ಲ - ಟಿಗರೂ ಅಲ್ಲ.

**ಗಡಿಯಾರ** ಗಡಿಯಾರವು ಕೆಟ್ಟ ಮಾತ್ರಕ್ಕೆ ಕ್ಯಾಲೆಂಡರು ಆದೀತೇ - ಸನ್ಯಾಸಿ ಕೆಟ್ಟ ಮಾತ್ರಕ್ಕೆ ಸಂಸಾರಿಯಾದಾನೆ ?

**ಗಡ್ಡಿ** ಗಡ್ಡಬಿಟ್ಟವನೇ ಗಡ್ಡಿ.

**ಗಣಪತಿ** ಕಾಲಾರು ತಲೆ ಮೂರು ತ್ರೈ ಮೂರ್ತಿಯಲ್ಲ
ಬಾಲಂಗಳೆರಡು ಕಿವಿನಾಲ್ಕು ಮೃಗವಲ್ಲ
ನಾಲಿಗೆಯು ನಾಲ್ಕುಂಟು ವಿಪರೀತವಲ್ಲ
ಸರ್ಪವನ್ನುಧರಿಸಿ ಮೂಷಿಕದ ಮೇಲಿರುವ ಗಣಪತಿ.

**ಗತವೈಭವ** ಗತವೈಭವಕ್ಕೆ ವೈಭವ ಉಳಿದಿರುವುದು ಅದು ಗತವಾದುದರಿಂದಲೆ.

**ಗದ್ಯ** ಪದದಿಂದ ಪದ್ಯ ಹುಟ್ಟಿತು - ಗದೆಯಿಂದ ಗದ್ಯ ಹುಟ್ಟಿತು.

**ಗರ್ವ** ಯೋಗ್ಯತೆ ಬರುವವರೆಗೂ ಗರ್ವವಿರುವುದು ಸಹಜ ಕರ್ಮ - ಗರ್ವ ಬಂದನಂತರವೂ ಯೋಗ್ಯತೆ ಬಾರದಿರುವುದು ದುಷ್ಕರ್ಮ ; ಬುದ್ಧಿ ಕಡಿಮೆಯಾದಂತೆಲ್ಲಾ ಗರ್ವ ಹೆಚ್ಚಾಗುತ್ತದೆ.

**ಗವರ್ನರ**



**ಗಾದೆ ಮಾತು** ಅಷ್ಟಷ್ಟು ಅನುಭವವನ್ನು ಇಷ್ಟಿಷ್ಟೇ ಮಾತಿನಲ್ಲಿ ಹೇಳುವ ಮಾತೇ ಗಾದೆ ಮಾತು. ನಡು ರಸ್ತೆಯಲ್ಲಿ ಒಡಮೂಡಿದ ಕಾಡು ದೇವರು ; ಗಾದೆ ಮಾತುಗಳು ಪರಸ್ಪರ ಯುದ್ಧ ಮಾಡುತ್ತಲೇ ಇರುತ್ತವೆ ; ಗಾದೆ ಮಾತಿಗೆ ಅರ್ಥ ಕೇಳುವವ ಅತಿ ಮೂರ್ಖ - ಹೇಳುವವ ಅವನಪ್ಪ; ಮಾತಿನ ಯಾತ್ರೆಯಲ್ಲಿ ಗಾದೆ ಮಾತು ಗಿಡದ ನೆಳಲು ಇದ್ದಂತೆ; ಅನೇಕರ ಅನುಭವಕ್ಕೆ ಒಬ್ಬನು ಒಗ್ಗರಣೆ ಹಾಕಿದರೆ ಒಂದು ಒಳ್ಳೆಯ ಗಾದೆ ಮಾತು ಆಗುತ್ತದೆ ; ಜಾಣನು ಗಾದೆ ಮಾತನ್ನು ಸೃಷ್ಟಿ ಮಾಡುತ್ತಾನೆ - ದಡ್ಡನು ಆಡುತ್ತಾನೆ ; ಗಾದೆ ಮಾತು ಸುಳ್ಳಾಡುವುದಿಲ್ಲ - ಸುಳ್ಳಾಡುವವನಿಗೆ ಸಹಾಯ ಮಾಡುತ್ತದೆ ; ಮಾತಿನ ಊಟಕ್ಕೆ ಗಾದೆ ಮಾತು ಉಪ್ಪಿನಕಾಯಿ ; ಗಾದೆ ಮಾತಿಗೆ ಕಿವಿಗೊಡದವನು ತಗಾದೆ ಮಾತಿಗೆ ತಲೆ ಕೊಡಬೇಕಾಗುತ್ತದೆ ; ಗಾದೆ ಮಾದು ಸುಳ್ಳಾದ ದಿನವೇ ಸರಕಾರಿ ವರದಿಯು ಸತ್ಯವಾಗುತ್ತದೆ.

**ಗಾಯ** ಗಾಯಕ್ಕೆ ಅಂಜುವ ಹೇಡಿಯು ಯುದ್ಧಕ್ಕೆ ಹೋಗಬಾರದು - ಸಲೂನಿಗೂ ಹೋಗಬಾರದು.

**ಗೀತೆ** ಯುಧ್ಧ ಪ್ರಚೋದಕ ಗ್ರಂಥ ; ಎಲ್ಲದಕ್ಕೂ ಹೂಗುಟ್ಟುವ ಭಾವಮೈದುನ ದೊರೆತರೆ ಎಲ್ಲರೂ ಗೀತೆ ಹೇಳಿಯಾರು ; ಗೀತೆ ಓದಿದರೆ ಪುಣ್ಯ ಬರುವುದಾದರೆ ಸ್ವರ್ಗದ ತುಂಬ ಕಂಪೋಜಿಟರುಗಳೇ ಇರುತ್ತಿದ್ದರು.

**ಗುಗ್ಗುರಿ** ಗುರುವಿನ ಗುರಿ ಅರ್ಥಾತ್ ಗುರುಪತ್ನಿ ; ಗುರಿ ನೋಡಿರಿ.

**ಗುಜುಗುಜು** ಹಾಯಿಸುವ ಮುನ್ನವೆ ತನ್ನ ಬೇಟೆಯನ್ನು ತಿನ್ನುವ ಕ್ರೂರ ರಾಕ್ಷಸ.

**ಗುಟ್ಟು** ಗುಟ್ಟಾಗಿ ಇಂದು ಮಾಡಿದ ಕೆಲಸಕ್ಕೆ ನಾಳೆ ಸಾಕ್ಷಿಗಳೇ ಇಲ್ಲವೆಂದು ಅಳಬೇಕಾಗುತ್ತದೆ ; ಎಲ್ಲರಿಗೂ ತಿಳಿದ ಮೇಲೆ ಗುಟ್ಟನ್ನು ಬಚ್ಚಿಡುವುದು ಸಾಧ್ಯ ; ಮೂವರಿಗೆ ತಿಳಿದ ಮಾತನ್ನು ಗುಟ್ಟಾಗಿ ಇಡಬೇಕಾದರೆ ಅವರಲ್ಲಿ ಇಬ್ಬರಾದರೂ ಸಾಯಲೇಬೇಕು - ಇನ್ನೊಬ್ಬನು ಬದುಕಿರಬಾರದು ; ಮೂಕನ ಕಿವಿಯಲ್ಲಿ ಗುಟ್ಟು ಹೇಳು - ನಾಲಗೆ ಬಂದೇ ಬಿಡುತ್ತದೆ. ; ಶತ್ರು ತಿಳಿಯಬಾರದ ಗುಟ್ಟನ್ನು ಮಿತ್ರನಿಗೂ ಹೇಳಬೇಡ ; ಸಾವಿನ ಗುಟ್ಟು ಅರಿತವರಿರಬಹುದು - ಪ್ರೇಮದ ಗುಟ್ಟು ಅರಿತವನಿನ್ನೂ ಹುಟ್ಟಲಿಲ್ಲ ; ಹೆಣ್ಣು ಗುಟ್ಟನ್ನು ತಪ್ಪದೆ ಹೊರ ಹಾಕುತ್ತದೆ - ಗುಟ್ಟು ಹೇಳಿದವನ ಹೆಸರನ್ನು ಹೊರಹಾಕದಿದ್ದರೆ ಅದೇ ಉಪಕಾರ.

**ಗುಡಿ** ಶೇ.50 ಜನರು ಗುಡಿಗೆ ಹೋಗುತ್ತಾರೆ, ಅಷ್ಟೇ ಜನರು ಸ್ವರ್ಗಕ್ಕೂ ಹೋಗುತ್ತಾರೆ - ಆದರೆ ಆ ಅವರೇ ದೇವರಾಣೆಯಾಗಿಯೂ ಈ ಇವರಲ್ಲ ; ದೇವನ ಗೋರಿಯೇ ದೇವನ ಗುಡಿ ; (ಬೇ) ಸತ್ತ ದೇವನ ಸಮಾಧಿ.

**ಗುಣ** ಅಷ್ಟು ಬೆಳ್ಳಿ ಇಷ್ಟೇ ಚಿನ್ನಕ್ಕೆ ಸಮ - ಎಷ್ಟು ಚಿನ್ನ ಇಷ್ಟೇ ಗುಣಕ್ಕೆ ಸಮ ?

**ಗುರಿ** ಗುರುಪತ್ನಿ ; ಮ್ಯಾಡಂ

**ಗುರು** ಗುರು ಶಿಷ್ಯನಿಗೆ ವಿದ್ಯೆಯನ್ನು ಕಲಿಸುತ್ತಾನೆ - ಶಿಷ್ಯನು ಬುದ್ಧಿಯನ್ನು ಕಲಿಸುತ್ತಾನೆ ; ತಾನೇ ತನ್ನ ಗುರು ಆದರೆ ಒಬ್ಬನಲ್ಲಿಯೆ ಇಬ್ಬರು ಮೂರ್ಖರು ಸೇರಿದಂತಾಯಿತು; ಕಳ್ಳನಾಗಿ ಕತ್ತಲಲ್ಲಿ ಅಲೆದಾಡಬೇಡ - ಗುರುವಾಗಿ ಮಠದಲ್ಲಿ ಮಲಗು.

**ಗೂಡು** ಚಿನ್ನದ ಪಂಜರದಲ್ಲಿ ಕಾಗೆಯನ್ನು ಇಕ್ಕಿದರೆ ತನ್ನ ಹಳೆಯ ಗೂಡನ್ನ ನೆನೆಸಿಕೊಂಡು ಅತ್ತಿತಂತೆ.

**ಗೃಹಛಿದ್ರ** ಬೆಳಕಿಂಡಿ-ಬೆಳಕು ಬರುವುದೇ ಗೃಹಛಿದ್ರದಿಂದ.

**ಗೃಹಸ್ಥ** ಅನುಗಾಲವೂ ಮನೆಯಲ್ಲಿಯೇ ಇರುವವನು.



**ಗೃಹಿಣಿ** ಗೃಹಿಣಿಯೇ ಗೃಹ - ಸುಂಣ ಬಂಣ ಅನುಗಾಲವೂ ಬೇಕು, ಆಗಾಗ್ಗೆ ರಿಪೇರಿಯಾಗಬೇಕು.

**ಗೆಲುವು** ಪ್ರತಿಬಾರಿಯೂ ನಿನಗೇ ಗೆಲವು ಆಗಬೇಕಾದರೆ ಒಂದೇ ಉಪಾಯ - ನೀನೊಬ್ಬನೇ ಆಡು.

**ಗೆಳತಿ** ಇಬ್ಬರು ಹೆಂಗಳೆಯರು ಗೆಳತಿಯರಾದರು ಎಂದರೆ ಮೂರನೆಯವಳು ಇಬ್ಬರಿಗೂ ಇಲ್ಲವಾದಳೆಂದೇ ಅರ್ಥ.

**ಗೆಳೆತನ** ಆಗಾಗ್ಗ ರಿಪೇರಿಯಾಗುತ್ತಲಿದ್ದರೆ, ನಾಲ್ಕು ಕಾಲ ಬಾಳುತ್ತದೆ ; ಉಪ್ಪಿನಂತೆ ಬಳಸಬೇಕು - ಸಕ್ಕರೆಯಂತೆ ಸುರುವಿಕೊಳ್ಳಬಾರದು.

**ಗೆಳೆಯ** ನನಗೆ ಮೂವರು ಗೆಳೆಯರಿದ್ದರು, ಒಬ್ಬನು ಸತ್ತ, ಇನ್ನೊಬ್ಬನು ಮದುವೆಯಾದ, ಮತ್ತೊಬ್ಬನು ದೇಶ ಭಕ್ತನಾದ - ನನ್ನ ಪಾಲಿಗಂತೂ ಒಬ್ಬರೂ ಇಲ್ಲದಾದರು ; ನೂರಾರು ಗೆಳೆಯರಿದ್ದರೂ ಸಮಯಕ್ಕೆ ಒಬ್ಬನೂ ಸಿಗುವುದಿಲ್ಲ - ಒಬ್ಬನೇ ಶತ್ರುವಿದ್ದರೂ

ಹೋದಲ್ಲೆಲ್ಲ ಅವನೇ ಕಾಣುತ್ತಾನೆ ; ಮುಂದೆ ಎಂದಾದರೂ ಶತೃವಾಗಬಹುದಾದವನೇ ಗೆಳೆಯ ; ಬಂಧು ಬಳಗವನ್ನು ದೇವನು ಗಂಟು ಹಾಕುತ್ತಾನೆ - ಗೆಳೆಯನನ್ನು ಆರಿಸಿಕೊಳ್ಳುವ ಅಧಿಕಾರವನ್ನು ನಿನಗೇ ಕೊಡುತ್ತಾನೆ ; ನನ್ನ ಶತ್ರುಗಳನ್ನು ದ್ವೇಷಿಸುವವನೇ ನನ್ನ ಗೆಳೆಯ ಎನ್ನುವ ಅವಿವೇಕಿಗೆ ಗೆಳೆಯನಾಗಬೇಡ - ಶತ್ರುವೂ ಆಗಬೇಡ ; ಗೆಳೆಯನಾಗಲು ಎಂತಹ ಕತ್ತೆಯಾದರೂ ಸಾಕು - ಹಗೆಯಾಗಲು ಯೋಗ್ಯ ಸಿಂಹವೇ ಬೇಕು ; ಗೆಳೆಯನನ್ನು ಕೊಂಚ ಕಾಲ ದೂರ ಮಾಡಿಕೊಳ್ಳಬೇಕಾದರೆ ಅವನಲ್ಲಿ ಸಾಲವನ್ನು ಬೇಡು - ಬಹುಕಾಲ ದೂರ ಮಾಡಿಕೊಳ್ಳಬೇಕಾದರೆ ಅವನಿಗೇ ಸಾಲವನ್ನು ಕೊಡು. ಒಬ್ಬೊಬ್ಬ ಗೆಳೆಯ ಸತ್ತಂತೆಲ್ಲನಾನೂ ಕೊಂಚ ಕೊಂಚ ಸಾಯುತ್ತೇನೆ ; ಗೆಳೆಯರನ್ನು ಗಳಿಸಿಕೊಳ್ಳುವುದೆಷ್ಟು ಸುಲಭವೋ ಉಳಿಸಿಕೊಳ್ಳುವುದೂ ಅಷ್ಟೇ ಕಷ್ಟ - ಕೆಲವರನ್ನು ಉಳಿಸಿಗೊಂಡರೆ ಇನ್ನೂ ಹೆಚ್ಚು ಕಷ್ಟ; ದೇವಾ ! ನನ್ನನ್ನು ನನ್ನ ಗೆಳೆಯರಿಂದ ರಕ್ಷಿಸು-ಶತ್ರುಗಳಿಂದ ನಾನೇ ರಕ್ಷಿಸಿಕೊಳ್ಳುತ್ತೇನೆ. ಸಂಪತ್ತು ಗೆಳೆಯರನ್ನು ತಂದು ಕೊಡುತ್ತದೆ - ಸಂಕಷ್ಟ ಅವರನ್ನು ಪರೀಕ್ಷಿಸುತ್ತದೆ. ಹೊಸ ಗೆಳೆಯನ ಬಗ್ಗೆ ಹೆಚ್ಚು ತಿಳಿದಷ್ಟೂ ಒಳಿತು - ಹಳೆಯ ವೈರಿಯ ಬಗ್ಗೆ ತಿಳಿಯದೆ ಉಳಿದಷ್ಟೂ ಒಳಿತು ; ಒಳ್ಳೆಯ ಗೆಳೆಯ ಎಲ್ಲಿಯಾದರೂ ದೊರೆಯುತ್ತಾನೆ - ಮೊದಲು ನೀನು ಹಾಗೆ ಆಗು ; ಹಲ್ಲು ನಾಲಿಗೆಯನ್ನು ಎಷ್ಟೋ ಸಲ ಕಚ್ಚುತ್ತದೆ - ಆದರೂ ಬಾಯಲ್ಲಿಯೇ ಇರುತ್ತವೆ. ಗೆಳೆಯರಾಗಿ ; ಇಬ್ಬರು ಇದ್ದಕ್ಕಿದ್ದಂತೆ ಗೆಳೆಯರಾದರೆ ಒಬ್ಬನಂತೂ ಶ್ರೀಮಂತ ; ನಿನ್ನ ಶ್ರೀಮಂತಿಕೆಯೆಂಬ ಜ್ವರದ ಉಷ್ಣವೆಷ್ಟು

ಎಂಬುದನ್ನು ಅಳತೆ ಮಾಡುವ ಥರ್ಮಾಮೀಟರೇ ನಿನ್ನ ಗೆಳೆಯ ; ನಿನ್ನ ಮನೆ ಸುಡುವಾಗ ನೀನು ಅಳುತ್ತೀ - ನಿನ್ನ ಗೆಳೆಯ ಕೈಕಾಸುತ್ತಾನೆ ; ನಿನಗೆ ನೂರು ಗೆಳೆಯರಿದ್ದರೆ ಅವರಲ್ಲಿ ನೂರೊಂದು ನಿನ್ನ ಜೇಬಿನ ಗೆಳೆಯರು.

**ಗೊತ್ತುವಳಿ** ಹೊತ್ತು ಕಳೆಯಲು ಗೊತ್ತುವಳಿಯೇ ಒಳ್ಳೆಯ ಉಪಾಯ ; ಗೊತ್ತುವಳಿಗಳನ್ನು ಮಾಡುತ್ತ ಹೊತ್ತು ಕಳೆಯುವುದು ಬೇಡ ಎಂದು ಗೊತ್ತುವಳಿ ಮಾಡಿದರೆ ಹೊತ್ತು ಉಳಿಯಿತೆ ?

**ಗೋರಿ** ತಿಗಣೆ, ಸೊಳ್ಳೆ, ಹೆಂಡತಿ ಮುಂತಾದವುಗಳ ಕಾಟವಿಲ್ಲದ ಏಕಮಾತ್ರ ಸುಖಶಯ್ಯಾಗೃಹ ; ಪಾತ್ರಧಾರಿಗಳಾದ ಮಾನವರು ವೇಷ ಬದಲಾಯಿಸುವ ಗ್ರೀನ್ ರೂಮು. ಒಂದು ಗೋರಿಯ ಮೇಲೆ ಈ ಲಿಖಿತವಿದ್ದಿತು :- "ಸೌಂದರ್ಯವಿತ್ತು - ಗರ್ವವಿರಲಿಲ್ಲ, ಸಾಮರ್ಥ್ಯವಿತ್ತು - ದುರುಪಯೋಗವಾಗಲಿಲ್ಲ, ಸದ್ಗುಣವಿತ್ತು - ಮೋಸ ವಂಚನೆ ಗೊತ್ತಿರಲಿಲ್ಲ." ಈ ಗೋರಿ ಮನುಷ್ಯನದಂತೂ ಅಲ್ಲ, ಪ್ರಾಯಶಃ ಯಾವುದೋ ನಾಯಿಯದಿರಬೇಕು.

**ಗೌರವ** ಗೌರವವಿಲ್ಲದವನೂ ಗೌರವಿಸಿಕೊಳ್ಳುತ್ತಾನೆ - ಅಗೌರವಿಸಿಕೊಳ್ಳಲು ಮಾತ್ರ ಗೌರವ ಉಳ್ಳವನೇ ಬೇಕು.

**ಗೌಳಿ** ನೀರಿಗೂ ಬೆಲೆ ಇದೆ - ಗೌಳಿಯ ಕೈಯಿಂದ ಬಂದರೆ.

**ಗಂಗಾಧರ** ನೀರು ತರುವ ಆಳು

**ಗಂಟೆ** ತಾನು ದೇವನ ಬಳಿ ಹೋಗದಿದ್ದರೂ ದೂರ ನಿಂತೇ ಇತರರನ್ನು ಕರೆಯುತ್ತದೆ ; ಕಲ್ಲಾಗುವಷ್ಟು ಕುಡಿದು

ಮಲಗಿರುವ ಶಿವುಡ ದೇವನನ್ನು ಎಬ್ಬಿಸಲು ಭಕ್ತರು ಬಾರಿಸುವ ಅಲಾರಾಂ ಗಡಿಯಾರ.

**ಗಂಡ** ವ್ರಣ, ಹುಂಣು - ಉದಾ : ಗಂಡಮಾಲೆ, ಗ್ರಾಮಸಿಂಹದ ಸ್ಥಾನದಲ್ಲಿರುವ ಗೃಹಸಿಂಹ : ಭಾವೀ ವಿಧುರ : ಬೈಯ್ಯಲಾರದ ಗಂಡನ ಪ್ರೀತಿ ಎಷ್ಟು - ಅವನೆಷ್ಟು ! ಇದೊಂದು ನೌಕರಿ - ಹೋಲ್ ಟೈಮ್ ಸರ್ವೆಂಟ್ ; ಗಂಡನ ಕಾಟ ತಪ್ಪಿದರೆ, ಗಂಡನ ಶ್ರಾದ್ಧ ಸುರುವಾಗುತ್ತದೆ ; ಗಂಡಂದಿರಲ್ಲಿ ಮೂರು ಜಾತಿ - ತಮ್ಮ ಹೆಂಡಂದಿರನ್ನು ತೆಗಳುವವರು, ಇತರರ ಹೆಂಡಂದಿರನ್ನು ಹೊಗಳುರವರು, ಎರಡನ್ನೂ ಒಂದೇ ಬಾರಿಗೆ ಮಾಡುವವರು ; ಎಲ್ಲವನ್ನೂ ತಿಳಿದೂ ಏನೂ ಅನುಮಾನಿಸದ ಗಂಡ ಒಳ್ಳೆಯ ಗಂಡ. ಯೋಗ್ಯನಾದ ಗಂಡನು ಯಾರಿಗೂ ಸಿಗುವುದಿಲ್ಲ - ಯೋಗ್ಯನಲ್ಲವೆಂದು ಕೆಲವು ಗೋಳಾಡುತ್ತಾರೆ, ಉಳಿದವರು ಯೋಗ್ಯನೆಂದು ತಿಳಿದುಕೊಳ್ಳುತ್ತಾರೆ ; ಎಲ್ಲ ಗಂಡಂದಿರ ರೀತಿ ಒಂದೇ - ಬೇರೆ ಬೇರೆ ಮುಖಗಳಿರುವ ಕಾರಣ ಅವರನ್ನು ಗುರುತಿಸಲು ಸಾಧ್ಯವಾಗಿದೆ ; ಕೆಲವು ಗಂಡಂದಿರು ಹೆಂಡತಿಯನ್ನು ಪ್ರೀತಿಸಿದರೆ, ಇನ್ನು ಕೆಲವು ಮದುವೆಯನ್ನು ಪ್ರೀತಿಸುತ್ತಾರೆ - ಅದಕ್ಕೇ ಮೇಲಿಂದ ಮೇಲೆ ಮದುವೆಯಾಗುತ್ತಾರೆ ; ದೇಹದ ನೋವಿಗೆ ಔಷಧಿ ಹಚ್ಚುತ್ತ ಮನಕ್ಕೆ ಹೊಸ ನೋವು ತರುವವನೇ ಗಂಡ; ಒಳ್ಳೆಯ ಮಗನಾಗಿದ್ದವನು ಒಳ್ಳೆಯ ಗಂಡನೂ ಆಗಬಲ್ಲ - ಹೆಂಡತಿ ಬರುವ ಮುನ್ನ ತಾಯಿ ಮಾತ್ರ ಸತ್ತಿರಬೇಕು ; ಪ್ರತಿ ಮನೆಯಲ್ಲಿಯೂ ಗಂಡನೇ ರಾಜ- ರಾಜ್ಯವಾಳುವುದು ಮಾತ್ರ ರಾಣಿ ; ಹೆಂಡತಿಯು ಕಡಿಮೆ ಪ್ರೀತಿಸಿದಂತೆಲ್ಲ ಗಂಡನು ದಾರಿಗೆ ಬರುತ್ತಾನೆ - ಗಂಡನು ಹೆಚ್ಚು ಪ್ರೀತಿಸಿದಂತೆಲ್ಲ

ಹೆಂಡತಿ ದಾರಿ ಬಿಡುತ್ತಾಳೆ ; ಹೆಂಡತಿಯನ್ನು ನಿಜವಾಗಿ ಪ್ರೀತಿಸುವ ಗಂಡ ಅನವಶ್ಯಕವಾಗಿ ಅವಳಿಗೆ ನಿಜ ಹೇಳುವುದಿಲ್ಲ ; ಹೆಂಣಿಗೆ ಸರಿಯಾದ ಗಂಡ ಸಿಕ್ಕರೆ ಸಾಲದು - ಸರಿಯಾದ ಸಮಯಕ್ಕೆ ಸಿಗಬೇಕು ; ರಾತ್ರಿ ಹೊತ್ತಾಗಿ ಮನೆಗೆ ಬರುವ ಸಾಕಿದ ಕಾಡು ಮೃಗವೇ ಗಂಡ ! ಹೆಂಡತಿ ಮತ್ತು ಗಿಂಡತಿ ಪರಸ್ಪರ ಭೇಟಿಯಾಗುವವರೆಗೆ ಮಾತ್ರವೇ ಸುಖವಾಗಿರುವ ಪ್ರಾಣಿ.

**ಗಂಡು** ಮಾತು ಹೆಂಣು - ಕೃತಿ ಗಂಡು ; ಗಂಡು ಒಲೆ ಇದ್ದಂತೆ, ಹೆಂಣು ಬೆಂಕಿ ಇದ್ದಂತೆ - ಇವರೀರ್ವರ ಮನಸ್ಸು ಗಾಳಿ ಇದ್ದಂತೆ ; ಹತ್ತು ಗಂಡುಗಳ ಕೈಯಿಂದ ಪಾರಾದ ವೀರನ ಬಲಪರೀಕ್ಷೆ ಮಾಡಬೇಕಾದರೆ ಒಂದು ಹೆಂಣಿನ ಬಾಯಿಗೆ ಕೊಟ್ಟು ನೋಡು ; ಗಂಡು ಮಹಾಪರ್ವತ - ಅದನ್ನು ಅಲುಗಾಡಿಸುವ ಚಿಕ್ಕ ಕೀಲು ಹೆಂಣು ; ಗಂಡು ಬೆಂಕಿ, ಹೆಂಣು ಬೆಂಣೆ - ಬೆಂಣೆ ತಂಣಗೇ ಉಳಿದು, ಬೆಂಕಿ ಕರಗುವುದು ಆ ದೇವನ ಮಾಯೆ ! ಕಂಣು ನೋಡಿ.

**ಗ್ರಂಥ** ಒಳ್ಳೆಯ ಗ್ರಂಥವನ್ನು ಬರೆಯಲು ಒಳ್ಳೆಯ ಬರೆಹಗಾರನಾದರೆ ಸಾಲದು-ಒಳ್ಳೆಯ ಮಾನುಷತ್ವವೂ ಬೇಕು ; ಒಂದು ಗ್ರಂಥದ ಹಣೆಬರೆಹವು ಗ್ರಂಥಕರ್ತನ ಯೋಗ್ಯತೆಯನ್ನಷ್ಟೇ ಅವಲಂಬಿಸಿಲ್ಲ - ಓದುಗನ ತಾಳ್ಮೆಯನ್ನೇ ಹೆಚ್ಚು ಅನುಸರಿಸಿದೆ.

**ಗಾಂಧಿ** ಗಂಧ ಉಳ್ಳವನೇ ಗಾಂಧಿ; ತೊಪ್ಪಿಗೆಯಿಂದ ಪ್ರಸಿದ್ಧ ವಾದ ಒಂದು ವ್ಯಕ್ತಿ; ದೇವನಕ್ಕಿಂತಲೂ ಗಾಂಧಿ ದೊಡ್ಡವನು-ದೇವನ ಹೆಸರಿನಕ್ಕಿಂತಲೂ ಗಾಂಧಿಯ ಹೆಸರು ಹೆಚ್ಚು ದುರುಪಯೋಗವಾಗುತ್ತಲಿದೆ;

ಗೋಡ್ಸೆಯನ್ನು ಕೊಲ್ಲಲು ಗಾಂಧಿಯೇ ಬೇಕು - ಗಾಂಧಿಯನ್ನು ಕೊಲ್ಲಲು ಗೋಡ್ಸೆಯೇ ಸಾಕು.

**ಗಾಂಧಿನಗರ** ಗಾಂಧಿಯನ್ನು ಕಂಡು ನಗುವವರಿರುವ ನಗರ.



**ಘಟಾಸ್ಫೋಟ** ಅತಿಯಾಗಿ ಬಿಗಿದರೆ ಗಟ್ಟಿ ಹಗ್ಗವೂ ಹರಿಯುತ್ತದೆ. ವಿವಾಹಗಳೇ ಘಟಾಸ್ಫೋಟಕಕ್ಕೆ ಕಾರಣ.



**ಚರ್ಚು** ಆರು ದಿನಗಳು ಕಚೇರಿಯೆ ಚರ್ಚು ಆಗದವನಿಗೆ, ಏಳನೆಯ ದಿನ ಚರ್ಚು ಆದಿತ್ಯವಾರದ ಕಚೇರಿಯಾಗುತ್ತದೆ.

**ಚರ್ಚೆ** ಜಾಣರು ಗುದ್ದಾಡಿದರೆ ಚರ್ಚೆ ಆಗುತ್ತದೆ - ದಡ್ಡರು ಚರ್ಚೆ ಮಾಡಿದರೆ ಗುದ್ದಾಟ ಆಗುತ್ತದೆ ; ಬುದ್ಧಿ ತ್ರಾಣದಕ್ಕಿಂತಲೂ ಕಂಠ ತ್ರಾಣವೇ ಹೆಚ್ಚು ಫಲಕಾರಿ ಇದರಲ್ಲಿ.

**ಚತುರೋಪಾಯ** ಆತ್ಮಸ್ತುತಿ ಮಾಡಿಕೊಳ್ಳುವನು ಮನೆಗೆ ಬಂದರೆ ಅವನನ್ನು ನಿಲ್ಲಿಸಿ ಮಾತನಾಡು, ಪರನಿಂದೆ ಮಾಡು

ವರನನ್ನು ಕೈಮುಗಿದು ಕಳಿಸಿಬಿಡು. ಮುಖಸ್ತುತಿ ಮಾಡುವವನನ್ನು ಕತ್ತಿಗೆ ಕೈಹಾಕಿ ದೂಡು, ತೆಗಳಲು ಬಂದವನನನ್ನು ತಂದೆಯಂತೆ ನೋಡು !

**ಚಪ್ಪಲಚಿತ್ತ** ದೇವನ ಮುಂದೆ ಕೈಮುಗಿದು ನಿಂತು, ಹೊರಬಿಟ್ಟ ಚಪ್ಪಲಿಯ ಮೇಲೆ ಚಿತ್ತವಿಟ್ಟ ಭಕ್ತನೇ ಚಪ್ಪಲ ಚಿತ್ತ; 'ದೇವಾ ! ನನ್ನ ಚಪ್ಪಲಿಗಳನ್ನು ಕಾಯಯಪ್ಪಾ' ಎಂದು ಕರಜೋಡಿಸಿ ಬೇಡುವವನು.



**ಚರಿತ್ರೆ** ಇದ್ದವರ ಕತೆಯಲ್ಲ, ಸತ್ತವರ ಕತೆಯೂ ಅಲ್ಲ, ಕೊಂದವರ ಕತೆ ; ನಡೆಯದೆ ಇದ್ದುದನ್ನು ನೋಡ

ದವನು ಬರೆದದ್ದು ; ಉದಾಹರಣೆಗಳಿಂದ ಹೇಳುವ ತತ್ವಜ್ಞಾನವೇ ಚರಿತ್ರೆ.

**ಚಾಕು** ಚಾಕು ಹರಿತವಾಗಿದ್ದರೆ ಕರಗಿದ ಬೆಂಣೆಯನ್ನೂ ಕೊಯ್ಯಬಹುದು.

**ಚಾಡಿ** ರೆಕ್ಕೆ ಇದೆ ಪಕ್ಷಿಯಲ್ಲ, ವಿಷವಿದೆ ಹಾವಲ್ಲ, ಹೆಣವನ್ನು ತಿನ್ನುತ್ತದೆ ಹದ್ದಲ್ಲ

**ಚಾತುರ್ಯ** ಆಡಬಾರದುದನ್ನು ಆಡಬೇಕಾದ ರೀತಿಯಲ್ಲಿ ಆಡುವುದು. ಮಾಡಬಾರದುದನ್ನು ಮಾಡಬೇಕಾದ ರೀತಿಯಲ್ಲಿ ಮಾಡುವುದು.

**ಚಾತುರ್ವರ್ಣ** ಜೇನು ಸಿಹಿ ಎನ್ನುವವ ಬ್ರಾಹ್ಮಣ, ಜೇನು ಹುಳುವಿನೊಟ್ಟಿಗೆ ಹೋರಾಡುವುದೇ ಸಿಹಿ ಎನ್ನುವವ ಕ್ಷತ್ರಿಯ, ಜೇನು ಮಾರುವುದರಿಂದ ಬರುವ ಲಾಭವೇ ಸಿಹಿ ಎನ್ನುವವ ವೈಶ್ಯ. ಇವರೆಲ್ಲರಿಗಾಗಿ ಜೇನು ಹುಳುವಿನಿಂದ ಕಚ್ಚಿಸಿ ಗೊಳ್ಳುವವನೇ ಶೂದ್ರ.

**ಚಿಕ್ಕಕತೆ** ಬಹುಚಿಕ್ಕವರು ಬರೆಯುವ ಅತಿ ದೊಡ್ಡ ಕತೆ.

**ಚಿತ್ರ** ಶಬ್ದಗಳಿಲ್ಲದ ಕಾವ್ಯ.

**ಚಿನ್ನ** ಚಿನ್ನವಿಲ್ಲದವನಿಗೆ ಅನ್ನವಿಲ್ಲ - ಇದ್ದವನಿಗೆ ಅಪಾಯ ವಿದೆ ; ತಾಳಿ ಹೋದಾಗ ಹೆಂಣು ಅಳುತ್ತದೆ - ತಾಳಿ ಚಿನ್ನದ್ದು ! ಸತ್ಯಕ್ಕೆ ಸರಿಯಾದ ಬೆಲೆ ದೊರೆಯಬೇಕಾದರೆ ಮೊದಲು ಚಿನ್ನವು ತಿಪ್ಪೆಯ ಮೇಲೆ ಬೀಳಬೇಕು. ಹೆಂಣು ಕತ್ತೆಯನ್ನೂ ಪ್ರೇಮಿಸುತ್ತದೆ - ಅದರ ಹೊಟ್ಟೆಯಲ್ಲಿ ಚಿನ್ನವಿದೆಯೆಂದು ಮಾತ್ರ ಅದು ನಂಬಬೇಕು ;

ಹೆಂಣಿಗಾಗಿ ಚಿನ್ನ ಹುಟ್ಟಲಿಲ್ಲ, ಚಿನ್ನಕ್ಕಾಗಿ ಹೆಂಣು ಹುಟ್ಟಿತು - ಮೊದಲು ಹುಟ್ಟಿದುದು ಚಿನ್ನ ಅಲ್ಲವೇ ?

**ಚುನಾವಣೆ** ಪ್ರಜಾಪ್ರಭುತ್ವದ ಕಾಲಶ್ರಾದ್ಧ ; ಜನಿವಾರ, ಶಿವದಾರ, ಗಡ್ಡ ಮುಂತಾದವುಗಳ ಮಧ್ಯೆ ಜರುಗುವ ಮಹಾಯುದ್ಧ ; ಕಣ್ಣಿಗೆ ಕಾಣದ ಮತವನ್ನು ಕೈಗೆ ಬಂದಷ್ಟಕ್ಕೆ ಮಾರಿಕೊಳ್ಳುವ ಜಾತ್ರೆ ; ಚುನಾವಣೆಯಲ್ಲಿ ಗೆದ್ದರೆ ಸೋತಂತೆ, ಸೋತರೆ ಸತ್ತಂತೆ, ಸತ್ತರೆ ಮಾತ್ರ ಗೆದ್ದಂತೆ ; ಶೋಕ ಸಭೆಯ ಅಧ್ಯಕ್ಷ ಪದವಿಗೂ ಚುನಾವಣೆ ಆದರೆ ಹಣಕೊಟ್ಟು ಮತಕೊಳ್ಳುವವರು ಇದ್ದಾರೆ ; ಸಾವು ಸನಿಯ ಬಂದಾಗ ಇರಿಬೆಗೆ ರೆಕ್ಕೆ ಬರುತ್ತದೆ - ಬಡತನ ಸನಿಯ ಬಂದಾಗ ಶ್ರೀಮಂತ ಚುನಾವಣೆಗೆ ಇಳಿಯುತ್ತಾನೆ.

**ಚಂಡು** ಚಂಡ, ಚಂಡಿಯರ ಸುಪುತ್ರ.

**ಚಂದ್ರ** ಪಕ್ಕಾ ದೇಶಭಕ್ತ - ಪರಧನದಂತಿರುವ ಸೂರ್ಯನ ಪ್ರಕಾಶವನ್ನು ಕೈಬಾಡಿಗೆ ತಂದು ತನ್ನ ಪ್ರತಿಷ್ಠೆ ಬೆಳೆಸಿಗೊಂಡವ.

**ಚಂದಾ** ದಕ್ಕಿಸಿಗೊಂಡವನ ಕೈಗೂಸು ; ಸಿಕ್ಕವರಿಗೇ ಮುಕ್ಕಾಂಣ.

**ಚಿಂತಾಮಣಿ** ಚಿಂತೆ ಜಾಸ್ತಿಯಾದರೆ ಜಪಮಣಿ ತಾನೇ ಕೈಗೆ ಬರುತ್ತದೆ.

**ಚಿಂತೆ** ಚಿಂತೆಯೇ ಉಪ್ಪು, ಸಂತೋಷವೇ ಸಕ್ಕರೆ- ಸಕ್ಕರೆ ತಿನ್ನುವವರು ಸಹಸ್ರಾರು ಇದ್ದರೂ ಉಪ್ಪು ತಿನ್ನದವನೇ ಇಲ್ಲ ; ಚಿಂತೆಯಿಂದ ಮಲಗುವ ಬದಲು ಚಿತೆಯ ಮೇಲೆಯೇ ಮಲಗು.

**ಚುಂಬನ** ಹೆಣ್ಣು ತನ್ನ ಮೊದಲ ಚುಂಬನವನ್ನು ಕಡೆವರೆಗೂ ನೆನಪಿನಲ್ಲಿ ಇಡುತ್ತದೆ - ಗಂಡು ತನ್ನ ಪ್ರತಿ ಕಡೆ ಚುಂಬನವನ್ನು ಮೊದಲೇ ಮರೆಯುತ್ತದೆ ; ಸರಕಾರವು ಚುಂಬನದ ಮೇಲೆ ಮನರಂಜನ ಕರವನ್ನು ಹೇರಿಲ್ಲ - ಸರಕಾರದಲ್ಲಿ ವೃದ್ಧರಿರುವುದೇ ಕಾರಣ !



**ಛಿದ್ರಾನ್ವೇಷಕ** ಇತರರ ಅಂಗಿಯ ಧೂಳು ಜಾಡಿಸುವವನು.



**ಜಗತ್ತು** ಜಗತ್ತನ್ನು ಬಿಟ್ಟು ನಾನು ಇರಬಲ್ಲೆ ಎನ್ನುವವ ಮೂರ್ಖ - ನನ್ನನ್ನು ಬಿಟ್ಟು ಜಗತ್ತು ಇರಲಾರದು ಎನ್ನುವವ ಮಹಾಮೂರ್ಖ ; ಜಗತ್ತೆನ್ನುವ ಗೊಂಡಾರಣ್ಯದಲ್ಲಿ ದಾರಿ ತಪ್ಪಿಸಿಗೊಳ್ಳದವರೇ ಇಲ್ಲ - ದಾರಿ ತಪ್ಪಿದ ಒಬ್ಬನು ದಾರಿ ತಪ್ಪಿದ ಇನ್ನೊಬ್ಬನನ್ನು ಕಂಡು ನಗುವುದೇ ಸ್ವಾರಸ್ಯ ; ಜಗತ್ತು ನಂಬುವುದೇ ಸುಳ್ಳನ್ನು - ಚಿಕ್ಕ ಪುಟ್ಟವನ್ನು ಮಾತ್ರ ಅಲ್ಲ, ಜಗತ್ತೊಂದು ಮಹಾಗ್ರಂಥ ; ಮನೆಯಲ್ಲಿಯೇ ಕುಳಿತವನು ಓದಿದ ಪುಟವನ್ನೇ ಓದುತ್ತಾನೆ : ಕೆಳಗಿನವರು ಮೇಲೆ ಏರಲಿಕ್ಕೆ, ಮೇಲಿನವರು

ಕೆಳಗಿಳಿಯಲಿಕ್ಕೆ ಜಗತ್ತು ಒಂದು ನಿಚ್ಚಣಿಕೆ ; ಈ ಜಗತ್ತನ್ನು ಬೈಯ್ಯುವವನು ಬೇರೆ ಇನ್ನೊಂದನ್ನು ಕಂಡಿದ್ದಾನೆಯೇ ? ಜಗತ್ತು ತಾನಾಗಿ ಏನನ್ನೂ ಕೊಡುವುದಿಲ್ಲ - ತೆಗೆದುಕೊಂಡವನಿಗೆ ಬೇಡೆನ್ನುವುದಿಲ್ಲ ; ಒದೆಯುವವನ ಬೆನ್ನು ಹತ್ತುತ್ತದೆ. ಬೆನ್ನು ಹತ್ತಿದವನನ್ನು ಒದೆಯುತ್ತದೆ ; ಜಗತ್ತೆಲ್ಲವೂ ಮೂರ್ಖರ ಮೆರವಣಿಗೆ ! ಆದರೆ ಅದರ ಮುಖಂಡ ನಾನೇ ಎಂದು ನಗುತ್ತಾನೆ ತಿಂಮ ; ಜಗತ್ತಿನಷ್ಟು ಸುಲಭವಾಗಿ ಮಣಿಯುವುದು ಮತ್ತೊಂದಿಲ್ಲ - ಮಣಿಸುತ್ತೇನೆ ಎನ್ನುವವನಿಗೆ ; 'ಜಗತ್ತಿನಿಂದ ನನಗೇನೂ ಆಗಬೇಕಾದುದು ಇಲ್ಲ' ಎಂದಾವನಾದರೂ ಅನ್ನುವವನಿದ್ದರೆ, ಅವನಿಂದ ಜಗತ್ತಿಗೆ ಏನೇನೂ ಆಗಬೇಕಾದುದು ಇಲ್ಲವೇ ಇಲ್ಲ ಎಂದು ಪ್ರತ್ಯೇಕವಾಗಿ ಹೇಳಬೇಕೆ ?

**ಜಗಳ** ಚಿಕ್ಕವರು ಮಾಡುವ ದೊಡ್ಡ ಯುದ್ಧ ಜಗಳ - ದೊಡ್ಡವರು ಮಾಡುವ ಚಿಕ್ಕ ಜಗಳ ಯುದ್ಧ.

**ಜಗಳಗಂಟ** ಸರಸ್ವತಿಯ ದುಷ್ಟಮಗ - ವರದಿಂದ ಹುಟ್ಟಿದವನಲ್ಲ, ಶಾಪದಿಂದ ಹುಟ್ಟಿದವನು.

**ಜನ್ಮದಿನ** ಸಾವಿನ ಬಗ್ಗೆ ಎಚ್ಚರಿಸಲು ಕಾಲರಾಯನು ವರ್ಷಕ್ಕೊಮ್ಮೆ ಗಂಟೆ ಬಾರಿಸುವ ಸುದಿನ.

**ಜನಪ್ರಿಯ** ಸ್ವಜನಪ್ರಿಯ - ಹೆಂಡತಿಯ ತಮ್ಮ, ಮಗಳ ಗಂಡ, ಅಕ್ಕನ ಮಗ ಮುಂತಾದವರಿಗೆ ಅತಿ ಬೇಕಾದವ - ಉದಾ : ಜನಪ್ರಿಯ ಮಂತ್ರಿ.

**ಜಲಪ್ರಾಣಿ** ಕನ್ನಡ ಕಾದಂಬರಿಗಳನ್ನೆಲ್ಲ ಸಮುದ್ರದಲ್ಲಿ ಚೆಲ್ಲಿದರೆ ಮಾನವ ಕೋಟಿಗೆ ಉಪಕಾರವಾದೀತು - ಪಾಪ ! ಜಲಪ್ರಾಣಿಗಳ ಗತಿ ?

**ಜಾಗ** ಬೆಂಕಿ, ನೀರು, ದೇಶಭಕ್ತ ಇವು ಮೂರಕ್ಕೆ ಜಾಗ ಮಾಡಿ ಕೊಡಲು ಇತರರೇಕೆ ಬೇಕು ?

**ಜಾಣ** ಹಲವು ಕೋಣಗಳಿರುವ ಪುಣ್ಯದಿಂದ ಕೆಲವು ಜಾಣರನ್ನು ಗುರುತಿಸಲು ಸಾಧ್ಯವಾಗಿದೆ ; ತಲೆಗೆ ಕೆಲಸ, ನಾಲಗೆಗೆ ರಜೆ ಕೊಡುವವನೇ ಜಾಣ ; ರಾತ್ರಿ ಪತ್ರಗಳನ್ನು ಬರೆದು ಬೆಳಗಿನಲ್ಲಿ ಸುಡುವವನೇ ಜಾಣ; ಜಾಣತನವನ್ನು ಬಚ್ಚಿಕ್ಕಿಗೊಳ್ಳುವುದೇ ಜಾಣತನದ ಮೊದಲ ಜಾಣತನ ; ಜಾಣನು ತಪ್ಪನ್ನು ಕ್ಷಮಿಸುತ್ತಾನೆ - ದಡ್ಡನು ತಪ್ಪನ್ನು ಮರೆಯುತ್ತಾನೆ : ದಡ್ಡ ಜಾಣನು ಮಾತನಾಡಿ ದಡ್ಡತನವನ್ನು ತೋರಿಸಿಕೊಳ್ಳುತ್ತಾನೆ. ಜಾಣ ದಡ್ಡನು ಸುಮ್ಮನಿದ್ದು ಜಾಣತನವನ್ನು ತೋರಿಸಿಕೊಳ್ಳುತ್ತಾನೆ. ಇಬ್ಬರು ಹೆಂಡರಿಗೂ ಒಳ್ಳೆಯವನಾಗಿ ಹೊಟ್ಟೆ ತಲೆಗಳನ್ನು ಕೆಡಿಸಿಕೊಳ್ಳದಿರುವನವನೇ ಜಾಣ ; ಯುದ್ಧಕಾಲದಲ್ಲಿ ಸಾಧುವಾಗಿಯೂ, ಶಾಂತಿಕಾಲದಲ್ಲಿ ಸೈನಿಕನಾಗಿಯೂ ಬಾಳುವವನೇ ಜಾಣ ; ಏಕಾಂಗಿಯಾಗಿ ಜಾಣನಾಗಿರುವವನಕ್ಕಿಂತಲೂ ಜಗತ್ತಿನೊಟ್ಟಿಗೆ ಹುಚ್ಚನಾಗಿರುವವನೇ ಹೆಚ್ಚು ಜಾಣ ; ತಿಂದ ಪೆಟ್ಟನ್ನು ನೆನಪಿನಲ್ಲಿಟ್ಟುಗೊಂಡವನೇ ಜಾಣ - ತಪ್ಪಿಸಿಕೊಂಡ ಪೆಟ್ಟನ್ನು ನೆನಪಿನಲ್ಲಿಟ್ಟುಗೊಂಡವನೇ ಕೋಣ.

**ಜಾತಿ** ದೇವನು ಕೊಟ್ಟ ಬುದ್ಧಿಗೆ ದೆವ್ವವು ಕೊಡುವ ಅಪೀಮು ; ಜಾತಿಯ ಬೆಂಬಲದ ಮೇಲೆ ಬದುಕುವವನು, ಸೂಳೆಯ ಗಳಿಕೆಯ ಮೇಲೆ ಬದುಕುವವನನ್ನು ಕಂಡು ನಗಬೇಕೆ ? ದಿವಾಳಿ ತೆಗೆದವನ ವ್ಯಾಪಾರ ಹೆಚ್ಚು - ಜಾತಿಗೆಟ್ಟವನ ಆಚಾರ ಹೆಚ್ಚು.

**ಜಾತೀಯತೆ** ದೊಡ್ಡ ಸೈಜಿನ ಸ್ವಾರ್ಥ ; ಜಾತೀಯತೆಯಲ್ಲಿಯೂ ಕೊಂಚ ನಿಸ್ವಾರ್ಥ ಬುದ್ಧಿ ಇದೆ - ಇದೂ ಇರಲಾರದಷ್ಟು ಸ್ವಾರ್ಥಿಗಳು ಇದ್ದಾರೆ.

**ಜ್ಞಾನ** ತಿಳಿಯದುದನ್ನು ತಿಳಿಯುವುದಷ್ಟೇ ಜ್ಞಾನವಲ್ಲ - ಎಂದೋ ತಿಳಿದಿದೆಯೆಂದು ತಿಳಿದುಕೊಂಡಿರುವು ದನ್ನು ತಿಳಿಯುವುದೇ ಜ್ಞಾನ.

**ಜ್ಞಾನಿ** ತಾನೆಷ್ಟು ಅಜ್ಞಾನಿಯೆಂಬುದನ್ನು ತಿಳಿದವನೇ ಜ್ಞಾನಿ.

**ಜಾಹೀರಾತು** ನೂರಾರು ಖರ್ಚು ಮಾಡಿ ಜಾಹೀರಾತು ಕೊಡುವ ಬದಲು, 'ಯಾರಿಗೂ ಹೇಳಬೇಡ, ನನ್ನ ಚಿನ್ನಾ ' ಎಂದು ನುಡಿದು,ನಿನ್ನವಳ ಕಿವಿಯಲ್ಲಿಯೇ ಹೇಳಿಬಿಡು.

**ಜೀವನ** ಜೀವನದ ಮೊದಲರ್ಧ ಹೆತ್ತ ತಂದೆ ತಾಯಿಗಳಿಂದ ಕೆಡುತ್ತದೆ - ಉಳಿದರ್ಧ ಹುಟ್ಟಿದ ಮಕ್ಕಳಿಂದ ಕೆಡುತ್ತದೆ ; ಜೀವನವು ಸಫಲವಾಗಬೇಕಾದರೆ ವೃದ್ಧಾಪ್ಯದ ಅನುಭವವು ಯೌವ್ವನದಲ್ಲಿ ಬರಬೇಕು. ಯೌವ್ವನದ ಹುಮ್ಮಸ್ಸು ವೃದ್ಧಾಪ್ಯದಲ್ಲಿ ಉಳಿದಿರಬೇಕು. ಜೀವನವು ಕಟ್ಟಕಡೆಗೆ ತನ್ನ ಮಟ್ಟಕ್ಕೇ ಬಂದು ಮುಟ್ಟುತ್ತದೆ - ಗೋರಿ ! ಜೀವನವು ಬಸ್ಸಿನ ಪ್ರಯಾಣವಿದ್ದಂತೆ - ಓಡುವಾಗ ಗಾಳಿ ಬಹಳ, ನಿಂತಾಗ ವಿಪರೀತ ಸೆಕೆ.

**ಜೀವನ ಚರಿತ್ರೆ** ಯಾರು ಬರೆದರೂ ಸರಿಯೆ - ಹೆಂಡತಿಯೊಬ್ಬಳ ಹೊರತು.

**ಜೀವನನಾಟಕ** ಮೂರೇ ಅಂಕಗಳು - ಹುಡುಗಾಟ, ಹೋರಾಟ, ಪೇಚಾಟ

**ಜೂಜು** ಜೂಜನ್ನಾಡುವುದು ತಪ್ಪಲ್ಲ - ಬಿಡದಿರುವುದು ತಪ್ಪು; ಇಬ್ಬರು ಮಾತ್ರ ಇದಕ್ಕೆ ಬರಕೂಡದು - ಹಣವಿದ್ದವರು ಮತ್ತು ಇಲ್ಲದವರು ; ಜೂಜಿನಲ್ಲಿ ಗೆಲ್ಲುವುದಲ್ಲ ಜಾಣತನ - ಗೆದ್ದಾಗ ಎದ್ದು ಹೋಗುವುದು ಜಾಣತನ; ಪ್ರತಿಯೊಂದು ಜೂಜಿನಾಟಕ್ಕೂ ಇಬ್ಬರು ಬೇಕೇ ಬೇಕು - ಮಹಾ ಮೂರ್ಖ ಮತ್ತು ಚತುರ ಚೋರ, ಉದಾ: ಧರ್ಮರಾಯ ಮತ್ತು ಶಕುನಿ !

**ಜೇಬು** ಸತ್ತವನು ಏನನ್ನೂ ಇಲ್ಲಿಂದ ಒಯ್ಯಲಾರ - ಆತ್ಮಕ್ಕೆ ಅಂಗಿಯೇ ಇಲ್ಲ, ಜೇಬು ಎಲ್ಲಿಂದ ಬರಬೇಕು ?

**ಜೇಲು** ಮಂತ್ರಿಗಳ ಬೇಸಿಕ್ ಟ್ರೇನಿಂಗ್ ಕಾಲೇಜು ; ರಜೆಯ ಮೇಲೆ ಬಂದಾಗ ಕಳ್ಳರು ತಂಗುವ ಗವರ್ನಮೆಂಟ್ ಗೆಸ್ಟ ಹೌಸ್.

**ಜೋಡು** ಜೋಡು ಮಾಡುವವನಿಗೆ ಕಚ್ಚಿಸಿಕೊಂಡು ತಿಳಿಯದು - ಕಚ್ಚಿಸಿಕೊಂಡವನಿಗೆ ಜೋಡು ಮಾಡಲು ತಿಳಿಯದು ; ಕಾಲಿನ ಜೋಡು ಕಳೆದರೆ ನಗಬೇಡ - ಬಾಳಿದ ಜೋಡು ಕಳೆದರೆ ಅಳಬೇಡ.



**ಡಾಕ್ಟರ್** ಯಮಧರ್ಮರಾಯನ ಕಮಿಶನ್ ಏಜೆಂಟ್ ; ಡಾಕ್ಟರನು ಮಾಡುವ ತಪ್ಪು ನೋಡಲು ಸಿಗುವುದಿಲ್ಲ - ಆದಷ್ಟು ಬೇಗ ಮಣ್ಣಲ್ಲಿ ಮುಚ್ಚುತ್ತಾರೆ, ಇಲ್ಲವೇ ಸುಡುತ್ತಾರೆ ;

ಕಾಹಿಲೆಯಿಂದ ಸತ್ತವರೆಲ್ಲ ಸ್ವಲ್ಪ - ಉಳಿದವರಿಗೆಲ್ಲ ಸದ್ಗತಿ ಕೊಟ್ಟವನು ಡಾಕ್ಟರನೇ ! ಗುಣಮಾಡುವ ಹೊಣೆ ದೇವನದು - ಹಣ ಬೇಡುವ ಅಧಿಕಾರ ಡಾಕ್ಟರನದು; ಕೊಲ್ಲುವ ಅಧಿಕಾರ ಡಾಕ್ಟರನಿಗೆ - ಕೊಂದ ಅಪಕೀರ್ತಿ ದೇವನಿಗೆ ; ನೀನು ನಾಳೆ ಸಾಯದಂತೆ ಮಾಡುತ್ತಾನೆ ಡಾಕ್ಟರ್ -ಇಂದೇ ಕೊಂದು ? ಡಾಕ್ಟರೊಬ್ಬರು ಒಂದು ಬಾರಿ ಶವಸಂಸ್ಕಾರಕ್ಕೆ ಬಂದಿದ್ದರು - ಅದೇ ಪ್ರಮೋಶನ್ ! ಡಾಕ್ಟರನು ಚಿಕ್ಕವನಿದ್ದಷ್ಟೂ ದೊಡ್ಡ ಸ್ಮಶಾನವೂ ಬೇಕು; ಡಾಕ್ಟರನನ್ನು ವಾರಸುದಾರನನ್ನಾಗಿ ಮಾಡಿಕೊಂಡ ಮೂರ್ಖನು ಅದೆಷ್ಟು ದಿನಗಳು ಬದುಕಿಯಾನು ? ಒಂದೇ ಬಾರಿಗೆ ನಾಲ್ಕು ಜನರಿಗೆ ಕೆಲಸ ಕೊಡಬಲ್ಲ ಶಕ್ತಿ ಡಾಕ್ಟರನಿಗಿದೆ - ಭುಜಕೊಡುವ ಕೆಲಸ ! ಕಾಯಿಲೆ ತಾನಾಗಿಯೇ ಗುಣವಾಗು ವವರೆಗೂ ಅಥವಾ ರೋಗಿಯು ಔಷಧಿಯಿಂದ ಸಾಯುವವರೆಗೂ ಡಾಕ್ಟರನು ಬೇಕೇ ಬೇಕು.



**ತ್ಯಜಿಸು** ಹೆಂಡತಿಯನ್ನು ತ್ಯಜಿಸಿದ್ದ ತಿಂಮನನ್ನು ಎಲ್ಲರೂ ಕೇಳಿದರಂತೆ ''ಅವಳಿಗೇನು ಸೌಂದರ್ಯವಿಲ್ಲವೇ ? ಗುಣವಿಲ್ಲವೇ ? ಕೆಲಸ ಮಾಡುವುದಿಲ್ಲವೇ ?'' ಎಂದು. ಕಾಲಲ್ಲಿದ್ದ ಜೋಡನ್ನು ತೋರಿಸಿ ತಿಂಮ ನುಡಿದನಂತೆ ''ಇದನ್ನು ನೋಡಿ ನೀವೇ ಹೇಳಿ, ಇದಕ್ಕೆ ಏನಿಲ್ಲವೆಂಬುದನ್ನು ? ಆದರೆ ಇದು ಎಲ್ಲಿ ಕಚ್ಚುತ್ತದೆಂಬುದು ನನ್ನ ಕಾಲಿಗೆ ಮಾತ್ರವೇ ಗೊತ್ತು.''

**ತತ್ವಜ್ಞಾನ** ಹಿಂದಿನ ಕಷ್ಟಗಳಿಗೆ ಸಮಾಧಾನ ಹೇಳುತ್ತದೆ, ಮುಂದಿನ ಕಷ್ಟಗಳಿಗೆ ಸಿದ್ಧ ಮಾಡುತ್ತದೆ - ಇಂದಿನ ಕಷ್ಟಗಳನ್ನು ಮಾತ್ರ ಹೇಗೋ ಸಹಿಸು ಎನ್ನುತ್ತದೆ ; ತತ್ವವನ್ನರಿಯದವನಿಗೆ ಜ್ಞಾನವಿಲ್ಲದವನು ಹೇಳುವುದೇ ತತ್ವಜ್ಞಾನ ; ಸಂಶಯವೇ ತತ್ವಜ್ಞಾನದ ಮೂಲ.

**ತತ್ವಜ್ಞಾನಿ** ಎಲ್ಲ ಬಗೆಯ ತತ್ವಜ್ಞಾನಿಗಳನ್ನೂ ಕಂಡಿದ್ದೇವೆ - ತನಗೇ ಹಲ್ಲು ನೋವಾದಾಗ ನಗಬಲ್ಲ ತತ್ವಜ್ಞಾನಿಯನ್ನು ಮಾತ್ರ ಇನ್ನೂ ಕಾಣಬೇಕಾಗಿದೆ.

**ತಪ್ಪಲಿಲ್ಲ** ಒಂದು ಕಚ್ಚುವ ನಾಯಿಗೆಂದು ತಿಂಮ ಎಸೆದ ಕಲ್ಲು ಒಬ್ಬ ಬೊಗಳುವ ರಾಜಕಾರಣಿಗೆ ತಾಗಿತು - ಅಂತೂ ನನ್ನ ಗುರಿ ತಪ್ಪಲಿಲ್ಲ ಎಂದ ತಿಂಮ.

**ತಪ್ಪು** ಹಳೆಯ ತಪ್ಪು ನೆನಪಿನಲ್ಲಿ ಉಳಿಯಬೇಕು - ಇಲ್ಲವಾದರೆ ಹೊಸ ತಪ್ಪಿಗೆ ಆಸ್ಪದವೆಲ್ಲಿ ? ನಾವು ಕ್ಷಮಿಸಲಾರದ ತಪ್ಪುಗಳೇ ಇಲ್ಲ - ಅವು ನಮ್ಮಿಂದಲೇ ಆಗಿರಬೇಕು, ಅಷ್ಟೇ ; ಮದುವೆ ಯಾದವನು ತನ್ನ ತಪ್ಪುಗಳನ್ನು ನೆನಪಿನಲ್ಲಿ ಇಡಬೇಕಿಲ್ಲ - ಒಂದೇ ಕೆಲಸಕ್ಕೆ ಇಬ್ಬಬ್ಬರೇಕೆ ? ಒಂದು ಹೆಂಣಿನ ತಪ್ಪನ್ನು ಪತ್ತೆ ಮಾಡಬೇಕಾದರೆ ಇನ್ನೊಂದು ಹೆಂಣಿನ ಮುಂದೆ ಇವಳನ್ನು ಹೊಗಳಿ ನೋಡು ; ತಪ್ಪು ಮಾಡದ ಗಂಡು ಇಲ್ಲ - ತಪ್ಪು ಮಾಡಿಸದ ಹೆಂಣು ಇಲ್ಲ ; ಆಗಿರುವ ತಪ್ಪಿನ ಬಗ್ಗೆ ಆಡದಿದ್ದರೆ ಆಯಿತು - ತಪ್ಪು ಆಗಿಯೇ ಇಲ್ಲ ; ಉಪ್ಪು ತಿನ್ನದವನಿದ್ದಿದ್ದರೆ ತಪ್ಪು ಮಾಡದವನೂ ಇರುತ್ತಿದ್ದ. ಅಂದ ಮಾತ್ರಕ್ಕೆ ಉಪ್ಪು ತಿನ್ನುವುದೇ ಕಸುಬಾಗ ಬಾರದು ; ಬಿಳಿ ಬಟ್ಟೆಯ ಮೇಲಿನ ಕಲೆ, ಒಳ್ಳೆಯವನ ತಪ್ಪು ಬಹು ಬೇಗ ಎದ್ದು ಕಾಣುತ್ತವೆ ; ನಿನ್ನ ತಪ್ಪುಗಳನ್ನು ನೀನು ಗಮನಿಸು - ಇತರರ

ತಪ್ಪುಗಳನ್ನು ಎಣಿಸುವ ತಪ್ಪು ತಪ್ಪುತ್ತದೆ ; ತಪ್ಪು ಮಾಡದವರು ಇಬ್ಬರೇ - ಸತ್ತವನು ಮತ್ತು ಹುಟ್ಟದವನು ; ಗಂಡಿನ ತಪ್ಪು ನೂರಾರು, ಹೆಂಣಿನ ತಪ್ಪು ಎರಡೇ-ಒಳಿತು ಮಾಡುವುದಿಲ್ಲ, ಮಾಡಿಸುವುದೂ ಇಲ್ಲ ; ನಮ್ಮ ಅನೇಕ ತಪ್ಪುಗಳು, ಒಪ್ಪಿಕೊಳ್ಳುವಷ್ಟು ಚಿಕ್ಕವೂ ಇಲ್ಲ - ತಿದ್ದಿಕೊಳ್ಳುವಷ್ಟು ದೊಡ್ಡವೂ ಇಲ್ಲ ; ನಮ್ಮ ಒಳ್ಳೆಯತನದಿಂದಲೂ ತಪ್ಪುಗಳಾಗುತ್ತವೆ - ಆದರೆ ಜಾಣತನದಿಂದ ಆಗುವಷ್ಟಲ್ಲ ; ಇತರರ ತಪ್ಪುಗಳನ್ನು ಕಂಣ ಮುಂದೆ ಇಟ್ಟುಗೊಳ್ಳುತ್ತೇವೆ - ನಮ್ಮವನ್ನು ಬೆನ್ನ ಹಿಂದೆ ಬಿಡುತ್ತೇವೆ, ಎಲ್ಲ ಕಾಲದಲ್ಲಿಯೂ, ಎಲ್ಲ ದೇಶದಲ್ಲಿಯೂ ಮಾನವನು ತಪ್ಪು ಮಾಡುತ್ತಲೇ ಸಾಗಿದ್ದಾನೆ - ರೀತಿಯಷ್ಟೇ ಬೇರೆ, ನೀತಿಯೊಂದೆ.

**ತಮ್ಮ** ಶ್ರೀಮಂತ ಗಂಡಿಗೆ ಮತ್ತುಸುಂದರ ಹೆಣ್ಣಿಗೆ ಅದೆಷ್ಟು ತಮ್ಮಂದಿರೋ !

**ತಲೆ** ಉಳ್ಳವರು ಬಹಳಿಲ್ಲ - ಉಳ್ಳವರಿಗೆ ಇದರ ಅರುವಿಲ್ಲ - ಇಲ್ಲದವರಿಗೆ ಇದೆಯೆಂಬ ಭ್ರಮೆ ಇದೆ ; ತಲೆ ಇಲ್ಲದವರ ಊರಲ್ಲಿ ತೊಪ್ಪಿಗೆಯೇ ರಾಜ ; ಬೋಳು ತಲೆಯವನಿಗೆ ಕೂದಲು ಬಿಳಿಯಾಗುವ ಅಂಜಿಕೆಯೇ ? ತಲೆ ಇದೆ ಎಂದು ತಪ್ಪು ತಿಳಿದವನಿಗೆ ತಲೆ ಇಲ್ಲವೆಂದು ತಿಳಿಯುವಷ್ಟೂ ತಲೆ ಬೇಡವೇ ?

**ತಲೆನೋವು** ತಲೆನೋವು ಆದ ಮಾತ್ರಕ್ಕೆ ತಲೆ ಇದೆ ಎಂದಂತಾಗಲಿಲ್ಲ - ತಲೆ ಕಡಿಮೆ ಇದ್ದಷ್ಟೂ ತಲೆನೋವು ಹೆಚ್ಚು.

**ತಲೆಭಾರ** ಪ್ರತಿಯೊಬ್ಬ ಮುಖಂಡನೂ ಕೊನೆಗೊಮ್ಮೆ ಪ್ರಜೆಗೆ ತಲೆಭಾರವಾಗುತ್ತಾನೆ.

**ತ್ಯಾಗ** ತ್ಯಾಗವೆಂಬ ದೇವಾಲಯಕ್ಕೆ ಭೋಗವೇ ಮಹಾದ್ವಾರ - ಹಿಂದಿನ ಬಾಗಿಲಿಂದ ಬೇಗ ಒಳಬರಬಹುದು, ಆದರೆ ಅಷ್ಟೇ ಬೇಗ ಹೊರ ಬರಬೇಕಾಗುತ್ತದೆ. ಕೆಲವರು ತ್ಯಾಗ ಮಾಡಿರುವುದು ಒಂದನ್ನೆ - ಬುದ್ಧಿಯನ್ನು ! ಅದನ್ನೂ ತ್ಯಾಗ ಮಾಡದವರು ಅನೇಕರಿದ್ದಾರೆ - ಇಲ್ಲದುದನ್ನು ಎಲ್ಲಿಂದ ತ್ಯಾಗ ಮಾಡಬೇಕು ?

**ತ್ಯಾಗಿ** ಹಣವನ್ನು ಎಡಗಾಲಿನಿಂದ ಒದೆದು ಮುಂದೆ ಸಾಗುವವನು - ಖರ್ಚು ಮಾಡಲು ಬಲಗಾಲ ಬದಿಯಲ್ಲಿ ಒಬ್ಬ ಭಕ್ತನಿದ್ದರೆ ಮಾತ್ರ.

**ತಾಪ** ತ್ರಿವಿಧ ತಾಪಗಳು- ತನಗಿರುವ ತಾಪ, ತನಗಿದೆಯೆಂದು ತಾನು ತಿಳಿದಿರುವ ತಾಪ, ಇತರರಿಗೆ ತೋರುವ ತಾಪ ; ವಿದ್ಯಾವಂತಳಾದ ಹೆಂಡತಿ, ಕವಿಯಾದ ಮಗ ಮತ್ತು ಬ್ರಾಹ್ಮಣ ಸೇವಕ ಇವು ತ್ರಿವಿಧ ತಾಪಗಳು ; ಕುದುರೆಯ ಆರೋಗ್ಯ, ಹೆಂಣಿನ ನಾಲಗೆ ಮತ್ತು ದೇಶಭಕ್ತನ ಪ್ರಾಮಾಣಿಕತೆಗಳ ಮೇಲೆ ಭರವಸೆ ಇಟ್ಟವನಿಗೆ ತಾಪ ತಪ್ಪುವುದಿಲ್ಲ.

**ತಾಮಸ** ತಮಾಷೆಗಾಗಿ ಮಾಡುವುದೆಲ್ಲ ತಾಮಸ ; ರಾಜಸ ನೋಡಿರಿ.

**ತಾಯಿ** ತಾಯಿಯಾಗುವವರೆಗೂ ಹೆಂಣು ಹೆಂಣಲ್ಲ. ತಂದೆಯಂತೆ ಅದೂ ಒಂದು ಪ್ರಾಣಿ ; ತಾಯಿಗಿಂತ ದೊಡ್ಡವರಿಲ್ಲ, ಉಪ್ಪಿಗಿಂತ ರುಚಿ ಇಲ್ಲ - ತಾಯಿಗಿಂತ ತಂದೆ ದೊಡ್ಡವನು ವಯಸ್ಸಿನಲ್ಲಿ, ಉಪ್ಪಿಗಿಂತ ಉಪ್ಪಿಟ್ಟು ರುಚಿ ತಟ್ಟೆಯಲ್ಲಿ ; ಈ ಜನ್ಮದಲ್ಲಿ ತಾಯಿಯನ್ನು ನಿರ್ಲಕ್ಷಿಸಿದವನು ಮುಂದಿನ ಜನ್ಮದಲ್ಲಿ ಮಲತಂದೆಯನ್ನು ಗೌರವಿಸಬೇಕಾಗುತ್ತದೆ. ತಾಯಿ

ಸತ್ತ ಮೇಲೆ ಅಪ್ಪನೇ ಚಿಕ್ಕಪ್ಪನಾಗುತ್ತಾನೆ - ಮನೆಗೆ ಚಿಕ್ಕಮ್ಮ ಬಂದರಂತೂ ಶತ್ರುವಾಗುತ್ತಾನೆ. ಸರ್ವಾಂತ ರ್ಯಾಮಿಯಾದ ದೇವನಿಗೆ ಎಲ್ಲೆಡೆಗಳಲ್ಲಿಯೂ ಇರಲು ಆಗಲಿಲ್ಲ - 'ನನ್ನ ಪ್ರತಿನಿಧಿಯಾಗಿರು' ಎಂದು ಕೆಲವು ಮನೆಗಳಲ್ಲಿ ತಾಯಿಯನ್ನು ನಿಯಮಿಸಿದ ನಂತೆ; ತಾಯಿ ಇಲ್ಲದೆ ದೇವನೂ ಹುಟ್ಟುವುದಿಲ್ಲ. ತಾಯಿಯ ಎಲ್ಲ ದುರ್ಗುಣಗಳೂ ತಂದೆಯ ಎಲ್ಲ ಸದ್ಗುಣಗಳೂ ಮಗನಲ್ಲಿ ಬಂದರೂ ಸಾಕು - ಆ ಮಗನು ತಂದೆಯದಕ್ಕಿಂತಲೂ ಒಳ್ಳೆಯ ಮಾನವ ನಾಗುತ್ತಾನೆ ; ತಾಯಿ ಕಲಿಸಲಾರದ ಸದ್ಗುಣವನ್ನು, ತಂದೆ ಕಲಿಸಲಾರದ ದುರ್ಗುಣವನ್ನು ಯಾವ ದೇವನೂ ಕಲಿಸಲಾರ ; ತಾಯಿಯನ್ನು ನೋಡು - ಮಗಳನ್ನು ಮದುವೆಯಾಗು ; ತಾಯಿಯಿಂದ ತಲೆಬಾಗಿಲಿಗೆ ಅದೆಷ್ಟೋ ದೂರ ; ತಾಯಿಯ ಕೈಯಿಂದ ಬಿದ್ದ ಪೆಟ್ಟಿಗೆಲ್ಲ ತಲೆ ಒಡೆದೀತೇ ? ತಾಯಿ ನಿನ್ನ ಅಳುವನ್ನು ಓಡಿಸುವುದಿಲ್ಲ - ತಾನು ಒಳೊಳಗೆ ಅತ್ತು, ನಿನಗೆ ಅಳು ಬಾರದಂತೆ ನಿನ್ನ ಮುಂದು ನಗುತ್ತಾಳೆ ; ತಾಯಿ ಮಗನನ್ನು ಪ್ರೀತಿಸುವುದು ಮಗನು ಒಳ್ಳೆಯವನೆಂದಲ್ಲ - ತನ್ನ ಮಗನೆಂದು ; ತಾಯಿ ಮಗನನ್ನು ಹಡೆಯುವುದಷ್ಟೇ ಅಲ್ಲ - ಹಣೆಬರೆಹವನ್ನು ಬರೆಯುತ್ತಾಳೆ.

**ತಾಲಿ** ಥಾಲಿ ಚಿಕ್ಕದಿದ್ದರೆ ತಾಲಿಯಾಗುತ್ತದೆ ; ತಂಬಿಗೆ ನೋಡಿರಿ.

**ತಾಳಿ** ಚಿನ್ನದ ಬೆಲೆ ಏರಿತೆಂದು ತಾಳಿಯನ್ನು ಮಾರುವುದುಂಟೆ ?

**ತ್ರಿಕಾಲಜ್ಞಾನಿ** ಇಂದಿನ ಗಂಡನ ಹಿಂದಿನ ಕತೆಯನ್ನು ಮುಂದಿನ ಉಪಯೋಗಕ್ಕಾಗಿ ತಿಳಿದವಳು.

**ತೋಳಬಲ** ಹಸಿವೆಯ ಸಾಮರ್ಥ್ಯ.

**ತಂಣಗೆ** ಸೂರ್ಯನೂ ತಂಣಗಾಗುತ್ತಿದ್ದ, ಅವನಿಗೊಂದ
ಹೆಂಣು ಗಂಟು ಬಿದ್ದಿದ್ದರೆ.

**ತಂದೆ** ತಂದೆ ಮೂರ್ಖನೆಂದು ಮಗನು ತಿಳಿಯುತ್ತಾನೆ
ಮಗನು ಮೂರ್ಖನೆಂಬುದು ತಂದೆಗೆ ತಿಳಿದ
ಇರುತ್ತದೆ. ಇವರೀರ್ವರೂ ಏನೆಂಬುದನ್ನು ತಾಯಿ
ಬಲ್ಲಳು. ಆದರೆ ಹೇಳುವುದಿಲ್ಲ.

**ತಂಬಿಗೆ** ಚಿಕ್ಕದಿದ್ದರೆ ತಂಬಿಗೆ, ದೊಡ್ಡದಿದ್ದರೆ ಥಂಬಿಗೆ, ಇನ್
ದೊಡ್ಡದಿದ್ದರೆ ಥಂಭಿಗೆ. ಇನ್ನೂ ದೊಡ್ಡದಿದ್ದ
ಥಂಭಿಘೆ; ಕೊಡ ನೋಡಿರಿ.

**ತಿಂಮ** ಕಾಯಿಲೆಯೆಂದು ಬಂದಿದ್ದ ಒಬ್ಬ ರೋಗಿಯನ
ಪರೀಕ್ಷಿಸಿ ಡಾಕ್ಟರ ಹೇಳಿದ,
'ನಿನಗಾವ ರೋಗವೂ ಇಲ್ಲ, ನೀನು ಮುಖ್ಯವಾ
ನಗಬೇಕಾಗಿದೆ. ನೀನು ತಿಂಮನ ಬಳಿ ಹೋಗ
ಅವನು ಜಗತ್ತನ್ನೇ ನಗಿಸುತ್ತಾನೆ".
"ಆಗಲಿ ಸ್ವಾಮಿ" ರೋಗಿ ನುಡಿದು ತಿರುಗಿದ.

"ನಿನ್ನ ಹೆಸರೇನಯ್ಯ ?' ಡಾಕ್ಟರ್ ಕೇಳಿದ.

"ತಿಂಮ".

**ತೊಂದರೆ** ಇತರರಿಗೆ ತೊಂದರೆ ಕೊಡುವುದೇನು ಸುಲಭವಲ್ಲ
ಮೊದಲು ತಾನು ತೆಗೆದುಕೊಳ್ಳಬೇಕು. ಕಡೆಗ
ತಾನೇ ತೆಗೆದುಕೊಳ್ಳಬೇಕು ; ತೊಂದರೆಯೇ ಬೇ
ಎನ್ನುವ ಹೇಡಿಯು ಹುಟ್ಟಿದನೇಕಂತೆ ? ಮಳೆ ಮತ
ಮಕ್ಕಳು ಎರಡೂ ಒಂದೇ - ತೊಂದ
ಕೊಡುವುದಕ್ಕಾಗಿಯೇ ಬರುತ್ತವೆ, ಉಪಯುಕ್ತವಾ
ತೊಂದರೆ.



**ದರ್ಜಿ** ದರ್ಜಿಯ ಸೊಟ್ಟ ಬಾಯಿಯೇ ಹೇಳುತ್ತದೆ - ಅವನ ಕತ್ತರಿ ಮೊಂಡಪಿದೆ ಎಂದು ; ನಾಳೆ ಎನ್ನುವ ಶಬ್ದವು ಹುಟ್ಟಿರದಿದ್ದರೆ ದರ್ಜಿ ಏನು ಮಾಡುತ್ತಿದ್ದನೋ ದೇವನೇ ಬಲ್ಲ ; ಗಂಟನ್ನು ಮರೆತ ದರ್ಜಿ, ಗಂಡನನ್ನು ಮರೆತ ಗರತಿಯಂತೆ.

**ದಡ್ಡ** ನನಗೆ ಶ್ರೀಮಂತಿಕೆಯನ್ನು ಕೊಟ್ಟು ಬಡತನದಿಂದ ಕಾಪಾಡು ಎಂದು ಬೇಡುವವನು ದಡ್ಡ - ನನ್ನ ಬಂಧು ಮಿತ್ರರಿಗೆ ಶ್ರೀಮಂತಿಕೆಯನ್ನು ಕೊಟ್ಟು, ಅವರ ಕಾಟದಿಂದ ಕಾಪಾಡು ಎಂದು ಬೇಡುವವನು ಜಾಣ ; ಬುದ್ಧಿವಂತನು ಸುಖವನ್ನು ಅಪೇಕ್ಷಿಸಿದಾಗಲೇ ಅವನು ಅರ್ಧ ದಡ್ಡನಾಗುತ್ತಾನೆ ; ಚಿಕ್ಕ ಮಗು ನಕ್ಕಾಗ ತಾಯ್ತಂದೆಗಳು ನಗುತ್ತಾರೆ - ಪಾಪ ! ಅವರೇನು ಬಲ್ಲರು, ಅದು ನಗುವುದು ತಮ್ಮ ದಡ್ಡತನವನ್ನೇ ಕಂಡು ಎಂದು.

**ದಣಿವು** ಇದಕ್ಕಿಂತಲೂ ಮೆತ್ತನ ತಲೆದಿಂಡು ಮತ್ತಾವುದಿದೆ ?

**ದತ್ತುಮಗ** ನೇಣು ಹಾಕಿಕೊಳ್ಳಲು ಕಡ ತಂದ ಇತರರ ಹಗ್ಗ.

**ದನ** ದಾನ ಕೊಡುವವನು ದಾನಿ - ಪಡೆಯುವವನು ದನ.

**ದಯಾಳು** ದೇವನು ದಯಾಳು - ಗಂಡಿಗೊಂದು ಹೆಣ್ಣು ಗಂಟು ಹಾಕಿದರೂ, ಕೊನೆಗೆ ಇಬ್ಬರಲ್ಲಿ ಒಬ್ಬರಿಗೆ ಸಾವು ತಂದು ಇಬ್ಬರನ್ನೂ ಕಾಪಾಡುತ್ತಾನೆ.

**ದಯೆ** ದಯೆ ಇಲ್ಲದ ಧರ್ಮ ಅದಾವುದಯ್ಯ ಎಂದು ಕಟುಕನಂಗಡಿಯಲ್ಲಿ ಮಾತ್ರವೇ ಏಕೆ? ದಳ್ಳಾಳಿ ಅಂಗಡಿಯಲ್ಲಿಯೂ ಬರೆಯಿಸಬಹುದು.

**ದರೋಡೆಕಾರ** ದೇಶಭಕ್ತ ದಡ್ಡನು ದರೋಡೆ ಮಾಡುತ್ತಾನೆ. ಜಾಣನು ದೇಶಭಕ್ತನಾಗುತ್ತಾನೆ.

**ದಾಡಿ** ಬಡವನ ಸಿಟ್ಟು ದಾಡಿಗೆ ಮೂಲ.

**ದಾತ** ಬೇಡುವನಕಿಂತಲೂ ಕೊಡದವನೇ ದಾತ ; ಮುಖಸ್ತುತಿಯ ಮಂತ್ರಕ್ಕೆ ಉದುರುವ ಮಾವಿನಕಾಯಿ.

**ದಾನ** ಧರ್ಮವು ಏರಿಕೊಂಡು ಬರುವ ಆದರ ಸ್ವಂತಗಾಡಿ ; ಮೊಟ್ಟಮೊದಲು ದಾನ ಕೊಟ್ಟವನೇ ಮಾನವ ಕುಲದ ಪ್ರಥಮವೈರಿ - ಇಂದಿರುವ ಭಿಕ್ಷುಕರೆಲ್ಲರೂ ಅವನ ಸಂತತಿ. ದಾನಕ್ಕಿಂತಲೂ ದೊಡ್ಡ ಪುಣ್ಯವು ಇನ್ನೊಂದಿಲ್ಲ ಎನ್ನುತ್ತಾನೆ. ದಾನ ಬೇಡಲು ಬಂದವನು.

**ದಾನವ** ದಾನ ಬೇಡುವವ.

**ದಾರಿದ್ರ್ಯ** ದಾರಿದ್ರ್ಯಕ್ಕೂ ದ್ರವ್ಯಕ್ಕೂ ಭೇದವು ಬಹಳಿಲ್ಲ. ಯಾವುದು ಹೆಚ್ಚಾದರೂ ಮನುಷ್ಯನು ಮೃಗವಾಗುತ್ತಾನೆ.

**ದ್ರಾಕ್ಷಿ** ಮಧುವಿನ ಮಾತ್ರೆ.

**ದಿಕ್ಕಿಲ್ಲದವನು** ದಿಕ್ಕಿಲ್ಲದವನು ಅತ್ತಾಗ ದೇವನ ಸಿಂಹಾಸನವು ಅಲುಗಾಡುತ್ತದೆ.

**ದಿವಂಗತ** ದಿವಂ ಗತಃ - ಹಗಲು ಸತ್ತವನು.

**ದೀಪ** ಬೆಳಕಿರುವಾಗಲೇ ತಮಿಳನು ದೀಪ ಹಚ್ಚಿಟ್ಟುಕೊಳ್ಳುತ್ತಾನೆ. ಮಲೆಯಾಳಿಯು ಮಾತಾಡುತ್ತ ಬಂದು ಈ ದೀಪದ ಬೆಳಕಿಗೆ ಕೂಡುತ್ತಾನೆ, ಕತ್ತಲಾಗುವ ಮುನ್ನ ತೆಲುಗನು ಅದನ್ನು ಕಸಿದುಗೊಳ್ಳುತ್ತಾನೆ, ಕತ್ತಲಲ್ಲಿ ಕಡ್ಡಿಪೆಟ್ಟಿಗೆ ಹುಡುಕುತ್ತಾ ಕಾಲ ಕಳೆದು ಬೆಳಗಾದ ಮೇಲೆ ಸ್ವಂತ ದೀಪವನ್ನು ಹಚ್ಚಿಗೊಳ್ಳುತ್ತಾನೆ ಕನ್ನಡಿಗ - ಅಂತೂ ಬಿಡುವುದಿಲ್ಲ.

**ದ್ವೀಪ** ಒಂದಾದರೆ ದೀಪ - ಎರಡಾದರೆ ದ್ವೀಪ.

**ದುರ್ಗುಣ** ಶತ್ರುವಿನಲ್ಲಿ ಇಲ್ಲದಿದ್ದರೂ ಕಾಣುತ್ತದೆ, ಮಿತ್ರನಲ್ಲಿ ಇದ್ದರೂ ಕಾಣುವುದಿಲ್ಲ. ತನ್ನಲ್ಲಿಯಂತೂ ಇರುವುದೂ ಇಲ್ಲ, ಕಾಣುವುದೂ ಇಲ್ಲ, ಒಂದು ದೊಡ್ಡ ದುರ್ಗುಣವಿರುವುದು ಕ್ಷೇಮ - ನೂರೆಂಟು ಚಿಕ್ಕ ಪುಟ್ಟವು ಮರೆಯಾಗುತ್ತದೆ.

**ದುಡಿ** ಎಲ್ಲವನ್ನೂ ಕೊಡುವವನು ದೇವನೇ ಎನ್ನುವಂತೆ ನುಡಿ - ಎಲ್ಲವನ್ನೂ ಮಾಡುವವನು ನೀನೇ ಎನ್ನುವಂತೆ ದುಡಿ.

**ದುಡುಕು** ಕುಂಟನ ಹೆಂಡತಿ ಕುಂಟಲೇಬೇಕು - ಕುಡುಕನ ಹೆಂಡತಿ ದುಡುಕಲೇ ಬೇಕು.

**ದುರ್ವ್ಯಯಿ** ಹಣ ಮತ್ತು ಸಮಯ ಒಂದೇ ಬಾರಿಗೆ ದುರ್ವಿನಿಯೋಗ ಮಾಡಿದವನಿಗೆ ಮೂರ್ಖರು ದುರ್ವ್ಯಯಿ ಎನ್ನುತ್ತಾರೆ.

**ದುರದೃಷ್ಟ** ದುರದೃಷ್ಟದ ಫಲವನ್ನು ಉಣ್ಣುವುದೇ ದುರದೃಷ್ಟದೊಡನೆ ಹೋರಾಡಿ ಗೆದ್ದಂತೆ.

**ದುರಾಶೆ** ಅನೇಕ ದುರಾಶೆಯೇ ಇತರರು ಕಳ್ಳರಾಗಲು ಕಾರಣ - ಬಚ್ಚಿಕ್ಕುವವರು ಬಹಳ, ಕದಿಯುವವರೇ ಕೊಂಚ !

**ದುರ್ವ್ಯಸನ** ಸುಖವನ್ನು ಮಾರಿ ದುಃಖವನ್ನು ಕೊಳ್ಳುವ ದಡ್ಡ ವ್ಯಾಪಾರದಲ್ಲಿ ದೊರೆಯುವ ದೊಡ್ಡ ಲಾಭ.

**ದುಷ್ಟಪದಾರ್ಥ** ಕಾಯಿಲೆಯವಳಿಗೆ ವೈದ್ಯ ಹೇಳಿದನಂತೆ, ದುಷ್ಟ ಪದಾರ್ಥಗಳನ್ನು ತ್ಯಜಿಸೆಂದು - ಎಳ್ಳು, ಎಣ್ಣೆ, ಹಲಸು, ಗಂಡ !

**ದೂರ** ದೂರದ ಗುಡ್ಡ ಕಣ್ಣಿಗೆ ನುಣುಪು ; ನಿನ್ನನ್ನು ದೂರವಿಡುವನು ತಾನೂ ದೂರವಿಟ್ಟುಕೊಳ್ಳುತ್ತಾನೆ.

**ದೂರಾಲೋಚನೆ** ಅತಿಯಾಗಿ ದೂರಾಲೋಚನೆ ಮಾಡುವುದು ಅವಿವೇಕಿಯ ಲಕ್ಷಣ - ಮಾಡದೆಯೇ ಇರುವುದು ಮೂರ್ಖರ ಲಕ್ಷಣ.

**ದೂಷಣೆ** ದೂಷಣೆಯನ್ನು ತಪ್ಪಿಸಿಕೊಳ್ಳುವುದು ಬಹು ಸುಲಭ - ಹುಟ್ಟಬಾರದು, ಇರಬಾರದು, ಸಾಯಬಾರದು.

**ದೆವ್ವ** ಮನೆ ಅಳಿಯ ಮನೆಯಲ್ಲಿಯೇ ಇರುವಾಗ ದೆವ್ವಕ್ಕೆ ಅಂಜುವವನಾವನು ?

**ದೇವ** ದೇವನೊಬ್ಬ - ದೇವರುಗಳು ಅನೇಕ ; ದೇವನನ್ನು ಹುಡುಕುವವನು ಮೊದಲು ದೇವಾಲಯದಿಂದ ಹೊರಬೀಳಲಿ ; ದೇವನಿದ್ದಾನೋ ಇಲ್ಲವೋ ಎಂಬುದು ನಮ್ಮ ಪ್ರಶ್ನೆಯಲ್ಲ (ಅವನು ಇರುವುದು ಇಲ್ಲದಿರುವುದು ನಮ್ಮ ತರ್ಕವನ್ನು ಅವಲಂಬಿಸಿಯಲ್ಲ !) - ಪೂಜಾರಿ ಇರಬಾರದೋ ಅಥವಾ ಹೋಗಬೇಕೋ ಎಂಬುದು ನಮ್ಮ ಪ್ರಶ್ನೆ ; ದೇವನು ನಿತ್ಯವೂ ಎಲ್ಲರಿಗೂ ನೂರಾರು ಬಾರಿ ಕಾಣಿಸಿಕೊಳ್ಳುತ್ತಾನೆ. ಗುರುತಿಸುವ ಭೂಪರು ?

ದೇವನು ನಾಮವಾಚಕವಲ್ಲ, ಕ್ರಿಯಾಪದ - ಕೆಲಸವೇ ದೇವರು. ಉದಾ : ಮೋಚಿಗೆ ಮೊಚ್ಚೆ ಹೊಲಿಯುವುದೇ ದೇವರು ; ದೇವನು ಇದ್ದಿರದಿದ್ದರೆ, ದೇವನನ್ನು ಸೃಷ್ಟಿಸಿ ಕೊಡು ಎಂದು ಆ ಇಲ್ಲದ ದೇವನನ್ನೇ ಪ್ರಾರ್ಥಿಸಬೇಕಿತ್ತು ; ಭಕ್ತಿಯು ಒಂದೇ ಒಂದು ದೇವನನ್ನು ಕೊಟ್ಟಿತು. ಭಯವು ನೂರಾರು ದೇವರುಗಳನ್ನು ಹುಟ್ಟಿಸಿತು ; ದೇವನು ಸದಾ ದುಡಿಯಲು ಸಿದ್ಧನಿದ್ದಾನೆ - ಆದರೆ ಮಾನವನ ಸಹಾಯವನ್ನು ತಪ್ಪದೆ ಅಪೇಕ್ಷಿಸುತ್ತಾನೆ. ದೇವನನ್ನು ಮರೆತು ಮಾನವನು ಬಾಳಬಲ್ಲ - ಮಾನವನನ್ನು ಮರೆತು ದೇವನು ಆಳಲಾರ ; ದೇವನಿದ್ದಾನೆ ಎನ್ನುವುದಕ್ಕೆ ಬೇರಾವ ಪುರಾವೆ ಬೇಕು - ಹೆಣ್ಣನ್ನು ಸೃಷ್ಟಿಸುವಂತಹ ಕೆಟ್ಟ ಕೆಲಸವನ್ನು ಬೇರಿನ್ನಾರು ಮಾಡಬಲ್ಲರು ? ತಾನು ತೊಳೆಯುವ ಕಲ್ಲೇ ಪೂಜಾರಿಗೆ ದೇವರು ; ಕಣ್ಣು ಕೊಟ್ಟು ದೇವನು ಪುಣ್ಯ ಮಾಡಿದ - ಹೆಣ್ಣು, ನಾಣ್ಯ ತೋರಿಸಿ ಪಾಪ ಮಾಡಿದ ; ದೇವನಿಗೂ ಅಂಜದವನಿಗೆ ನೀನು ಅಂಜು; ನೂತನ ಪತ್ನಿಯ ಅಡುಗೆಯನ್ನು ಉಣ್ಣುತ್ತಿದ್ದೇನೆ, ಸರಕಾರಿ ಡಾಕ್ಟರನಿಂದ ಔಷಧಿ ತೆಗೆದುಕೊಳ್ಳುತ್ತಿದ್ದೇನೆ, ರಾಜಕಾರಣಿಗಳ ಭಾಷಣ ಕೇಳುತ್ತಲಿದ್ದೇನೆ, ವಿಶೇಷ ಸಂಚಿಕೆಗಳಲ್ಲಿ ಪ್ರಕಟವಾಗುವ ಕವನಗಳನ್ನು ಕಂಡಿದ್ದೇನೆ, ತಿಂಗಳಿಗೊಮ್ಮೆ ತಪ್ಪದೆ ತಪ್ಪುಗಳೊಂದಿಗೆ ಅಚ್ಚಾಗುವ ವಾರಪತ್ರಿಕೆಗಳನ್ನು ಓದುತ್ತಿದ್ದೇನೆ, ಪಕ್ಕದ ಮನೆಯ ಕನ್ನೆ ಸಂಗೀತ ಕಲಿಯುವುದನ್ನು ಆಲಿಸುತ್ತಿದ್ದೇನೆ, ಪ್ರಾಥಮಿಕ ಶಾಲಾ ಮಾಸ್ತರನಾಗಿ ದುಡಿಯುತ್ತಲಿದ್ದೇನೆ, ಆದರೂ ನಾನಿನ್ನು ಸತ್ತಿಲ್ಲ - ದೇವನು ಸರ್ವಸಂಕಷ್ಟಗಳಿಂದ ರಕ್ಷಿಸುತ್ತಾನೆ

ಎಂಬುದು ಸುಳ್ಳಲ್ಲ, ದೇವನು ಮಾತ್ರ ತಪ್ಪು ಮಾಡಿಲ್ಲವೇ ? ಹಾಗಾದರೆ ಈ ಜಗತ್ತನ್ನು ಯಾರು ಸೃಷ್ಟಿಸಿದರು ? ದೇವರು ಮಾನವನಿಗೆ ಅನ್ನವಾಗಬಾರದು, ಔಷಧಿಯಾಗಬೇಕು ; ದೂರದ ಗುಡಿಯ ದೇವನೇ ದೊಡ್ಡವನು ; ಕೊಡುವ ದೇವನು ಬಡವನೇ ? - ಅಲ್ಲ, ಕೊಡದ ದೇವನು ಕೃಪಣ ; ಬತ್ತವನ್ನು ದೇವನು ಕೊಟ್ಟನೆಂದು ಕುಟ್ಟದೆ ತಿನ್ನಲು ಬಂದೀತೇ ? ಎಲ್ಲ ಮಾನವರಿಗೂ ಒಬ್ಬ ದೇವನೇ ಸಾಕು - ಕುಡುಕನ ಹೆಂಡತಿಗೆ ಅದೆಷ್ಟು ದೇವರುಗಳು ಬೇಕೋ ? ಹಲ್ಲು ಕಸಿದುಕೊಂಡು ಕೂಡಲೇ ಕಡಲೆ ಕೊಡುವವನೇ ದೇವ ; ಮಾನವನನ್ನು ದೇವನು ಸೃಷ್ಟಿಸಿದುದು ತನ್ನ ಲೀಲೆಗೆ - ದೇವನನ್ನು ಮಾನವನು ಸೃಷ್ಟಿಸಿದುದು ತನ್ನ ಉಪಯೋಗಕ್ಕೆ ; ದೇವನಿದ್ದಾನೆ ಎನ್ನುವುದಕ್ಕೆ ಬಾಯಿ ಮಾತ್ರ ಸಾಕು - ದೇವನಿಲ್ಲ ಎನ್ನುವುದಕ್ಕೆ ಬಾಯಿ, ಬುದ್ಧಿ, ಶಕ್ತಿ, ಧೈರ್ಯ ಬೇರೆಲ್ಲವೂ ಬೇಕು ; ದೇವನು ಹೇಗಿದ್ದಾನೆ ಎನ್ನುವುದನ್ನು ತಿಳಿಯದವನು, ದೇವನಿದ್ದಾನೆ ಎನ್ನುವುದನ್ನು ನಂಬುತ್ತಾನೆ.

**ದೇವನ ಮನೆ** ಸೃಷ್ಟಿ ಎಲ್ಲವೂ ದೇವನ ಮನೆ - ಮಾನವ ಕಟ್ಟುವ ದೇವನ ಗುಡಿ ದೇವನ ಜೇಲು.

**ದೇವರನಾಮ** ಕೆಲವು ಭಕ್ತಾದಿಗಳಿಗೆ ಇದು ಜೀವನೋಪಾಯ - ದೇವರ ಬೆಳ್ಳಿ ನಾಮಗಳನ್ನು ಕದ್ದು ಜೀವಿಸುವವರೂ ಇದ್ದಾರೆ ; 'ನಾಮ ಒಂದೇ ಸಾಲದೆ' ಎಂದು ಹಾಡಿದ ಭಕ್ತ ದೇವನ ಹಣೆ ಮೇಲಿನ ಇನ್ನೆರಡು ಬೆಳ್ಳಿಯ ನಾಮಗಳನ್ನು ಕಿತ್ತಿಕೊಂಡು ಮಾರಲು ನಡೆದನಂತೆ.

**ದೇವಾಲಯ** ಮಕ್ಕಳಿಗೆ ಶಾಲೆ ಕಟ್ಟಲು ಕಲ್ಲು ದೊರೆಯದಿದ್ದರೆ ದೇವಾಲಯವನ್ನು ಕೆಡವಬೇಕು - ಇದು ದೇವನ ಇಚ್ಛೆ.

**ದೇಶಭಕ್ತ** ದೇಶಭಕ್ತ ; ಕೂಲಿ ರಾಜಕಾರಣಿ ; ದರೋಡೆಕೋರ ; ಮೊದಲು ದರೋಡೆ ಮಾಡಿ ನಂತರ ಜೇಲು ಕಂಡವ, ದರೋಡೆಕಾರ - ಮೊದಲು ಜೇಲು ಕಂಡು ನಂತರ ದರೋಡೆ ಮಾಡಿದರೆ ದೇಶಭಕ್ತ ; ದೇಶಭಕ್ತನು ಕೈಕುಲಿಕಿ ಹೋದ ನಂತರ ನಿನ್ನ ಕೈಯ್ಯನ್ನು ನೋಡಿಕೋ - ಉಂಗುರವಿದೆಯೆ ಇಲ್ಲವೇ ಎಂದಲ್ಲ, ಐದೂ ಬೆರಳುಗಳಿವೆಯೇ ? ದೇಶಭಕ್ತನನ್ನು ಮೋಸಗೊಳಿಸಬೇಕಾದರೆ ಇನ್ನೊಬ್ಬ ದೇಶಭಕ್ತನನ್ನು ಹಿಡಿ ; ಹಸಿವಿನಿಂದ ಆಡು ಸಾಯಲಿಲ್ಲ - ಬಡತನದಿಂದ ದೇಶಭಕ್ತ ಬಾಳಲಿಲ್ಲ ; ದೇಶಭಕ್ತರಲ್ಲಿ ಮೂರು ಬಗೆಗಳು - ಒಬ್ಬನನ್ನು ಹಣದಿಂದ ನಂಬಬೇಡ, ಇನ್ನೊಬ್ಬನನ್ನು ಹೆಣ್ಣಿನಿಂದ ನಂಬಬೇಡ, ಮತ್ತೊಬ್ಬನನ್ನು ಇವೆರಡರಿಂದಲೂ ನಂಬಬೇಡ ; ಒಬ್ಬಳಿಗೆ ಇಬ್ಬರು ಮಕ್ಕಳು, ಒಬ್ಬನು ಸತ್ತ, ಇನ್ನೊಬ್ಬನು ದೇಶಭಕ್ತನಾದ - 'ಹಡೆದೊಡಲು ಬಂಜೆಯಾಯಿತೆ ? ಎಂದು ಅತ್ತಳು.

**ದೇಶಸಂಚಾರಿ** ಕೈಯ್ಯಲ್ಲಿ ಕುಬೇರನ ಗೆರೆ, ಕಾಲಲ್ಲಿ ನಾಯಿಯ ಗೆರೆ ಉಳ್ಳವನು.

**ದೇಶಾಭಿಮಾನ** ಹೊಟ್ಟೆಯಲ್ಲಿ ಅನ್ನವು ತುಂಬಿದ್ದರೆ ಹೃದಯದಿಂದ ದೇಶಾಭಿಮಾನವು ಹೊರಸೂಸುತ್ತದೆ ; ಮೊದಲು ದೇಹಾಭಿಮಾನ - ನಂತರ ದೇಶಾಬಿಮಾನ ; ಜಗತ್ತಿನ ಶಾಂತಿಗೆ ಮೊದಲ ವೈರಿ ದೇಶಾಭಿಮಾನ, ಕಡೆಯ ವೈರಿ ದೇಶಾಭಿಮಾನ.

**ದ್ವೇಷ** ತನಗಿಂತಲೂ ಮಿಗಿಲಾದುದನ್ನು, ತನಗೆ ದೊರೆಯಲಾದುದನ್ನು ದ್ವೇಷಿಸುವುದು ಸಹಜ ; ನೀನು ಯಾರನ್ನು ದ್ವೇಷಿಸುತ್ತೀಯೋ ಅವನ ಮನೆಯಲ್ಲಿಯೇ ಊಟ ಮಾಡು ; ಓರ್ವನು ಒಂದು ಹೆಂಣನ್ನು ದ್ವೇಷಿಸುತ್ತಾನೆ ಎಂದರೆ, ಅದರ ಅರ್ಥ ಇಷ್ಟೆ - ಆ ಹೆಂಣು ಅವನಿಗೆ ದೊರೆತಿಲ್ಲ ಅಥವಾ ದೊರೆತಿದೆ ; ನಾನು ದ್ವೇಷವನ್ನೇ ಅರಿಯೆ ಎನ್ನುವವನನ್ನು ಚುನಾವಣೆಗೆ ನಿಲ್ಲಿಸಿ ನೋಡು ; ಅವನೇನೆಂಬುದನ್ನು ತಿಳಿದಿಲ್ಲವಾದುದರಿಂದ ಅವನನ್ನು ದ್ವೇಷಿಸುತ್ತೇವೆ - ದ್ವೇಶಿಸುತ್ತೇವಾದುದರಿಂದ ಅವನೇನೆಂಬುದನ್ನು ತಿಳಿಯುವುದಿಲ್ಲ ; ದ್ವೇಷವನ್ನು ಹೃದಯದಲ್ಲಿ ತುಂಬಿಕೊಳ್ಳುವವನು ಚಿನ್ನದ ಪೆಟ್ಟಿಗೆಯಲ್ಲಿ ಜಂಗು ಹಿಡಿದ ಕಬ್ಬಿಣವನ್ನು ತುಂಬುವವನನ್ನು ಕಂಡು ನಗಬೇಕೆ ?

**ದೈವ** ದೈವವು ಒಲಿದರೆ ಬೇಕಾದಷ್ಟು ಧನವನ್ನೀಯುತ್ತದೆ - ಆದರೆ ಒಬ್ಬನಿಗಾದರೂ ಸಾಕೆನಿಸುವಷ್ಟು ಇದುವರೆಗೂ ಇತ್ತುದಿಲ್ಲವಲ್ಲ ?

**ದೊಡ್ಡ** ನಕ್ಷತ್ರಕ್ಕೂ ದೊಡ್ಡವರಿಗೂ ಒಂದೇ ಭೇದ - ದೂರದಿಂದ ಚಿಕ್ಕದಾಗಿ ಕಂಡರೂ ಸನಿಯ ಬಂದಂತೆಲ್ಲ ದೊಡ್ಡದಾಗುವುದು ನಕ್ಷತ್ರ. ದೂರದಿಂದ ದೊಡ್ಡವರಾಗಿ ಕಂಡು ಸನಿಯ ಬಂದಂತೆಲ್ಲ ಚಿಕ್ಕವರಾಗುತ್ತಾರೆ ದೊಡ್ಡವರು. ನಿಜವಾದ ದೊಡ್ಡವನು ನದಿಯಂತೆ - ಆಳವು ಹೆಚ್ಚಿದಂತೆಲ್ಲ ಸಪ್ಪಳ ಕಡಿಮೆ.

**ದೊಡ್ಡ ತಪ್ಪು** ಹಲವಾರು ಚಿಕ್ಕಪುಟ್ಟ ತಪ್ಪುಗಳಿಲ್ಲದಿರುವುದೇ ಬಹು ದೊಡ್ಡ ತಪ್ಪು.

**ದೊಡ್ಡ ಮನುಷ್ಯ** ದೊಡ್ಡ ಮನುಷ್ಯನಿಗೆ ಮುಖ್ಯವಾಗಿ ಇವೆರಡೂ ಇರಲೇಬೇಕು. ದೊಡ್ಡತನ ಮತ್ತು ಮಾನುಷತ್ವ ; ನಾಲ್ಕು ಜನರಿಗೆ ಬೇಕಾದವರೆಲ್ಲರೂ ದೊಡ್ಡ ಮನುಷ್ಯರೇ ಎನ್ನುವುದಾದರೆ ಸತ್ತವರೆಲ್ಲರೂ ದೊಡ್ಡ ಮನುಷ್ಯರೇ !

**ದೊಡ್ಡಸ್ತನ** ದೊಡ್ಡ - ಸ್ತನ

**ದೋಣಿ** ಎರಡು ಜಡೆಯವಳು.



**ದ್ರೋಹ** ಹೆಂಣಿಗೆ ಆಗಬಲ್ಲ ದ್ರೋಹಕ್ಕಿಂತಲೂ ದೊಡ್ಡ ದ್ರೋಹವನ್ನು ಹೆಂಣಲ್ಲದೆ ಬೇರಾರು ತಾನೇ ಮಾಡಬಲ್ಲರು

**ದ್ರೌಪತಿ** ಗಂಡನನ್ನೇ ಕಾರಿನ ಡ್ರೈವರಾಗಿ ಉಪಯೋಗಿಸುವವಳು
ಅಥವಾ ಡ್ರೌಪತಿ ; ಧರ್ಮರಾಯನ ಒಂದೈದಾಂಶ ಅಂಗಿ.

**ದಂತ** ದಂತಹೀನರಲ್ಲಿಯೇ ದೊಡ್ಡ ದಂತವೈದ್ಯನಿಗೆ ಗಿರಾಕಿಗಳು ಹೆಚ್ಚು.

**ದಂಪತಿ** ದಮ್ಮು ಹತ್ತಿದ ಪತಿ ಅಥವಾ ಧಮ್ಮನ ಪತಿ ; ಅಡುಗೆ ಬಾರದ ಗಂಡ, ಓದು ಬಾರದ ಹೆಂಡತಿ, ಆದರ್ಶ ದಂಪತಿಗಳಾಗುತ್ತಾರೆ.

**ದುಃಖ** ಎರಡು ಸುಖ ತೋಟಗಳ ಮಧ್ಯೆ ಇರುವ ಮುಳುಬೇಲಿ ; ಇದು ರೋಗವೂ ಅಹುದು - ಔಷಧಿಯೂ ಅಹುದು - ದುಃಖಕ್ಕೆ ಎರಡೇ ಕಾರಣಗಳು - ಬಯಸಿದುದು ದೊರೆಯದೆ ಇರುವುದು ಒಂದು, ದೊರೆಯುವುದು ಇನ್ನೊಂದು;

ದುಃಖವನ್ನು ಸುಲಭವಾಗಿ ಎಲ್ಲರೂ ಗೆಲ್ಲಬಹುದು - ದುಃಖಿಯೊಬ್ಬನ ವಿನಹ; ದುಃಖವೆಂಬುದೊಂದು ಶಿಶು - ಪೋಷಿಸಿದಂತೆಲ್ಲ ಪರಿಪುಷ್ಟವಾಗಿ ಬೆಳೆಯುತ್ತದೆ. ತನ್ನನ್ನು ತಾನು ಗೆದ್ದವನು ಸುಖವನ್ನೆಷ್ಟು ಬೇಗ ಸನಿಯ ತಂದುಕೊಳ್ಳಬಲ್ಲನೋ ದುಃಖವನ್ನೂ ಅಷ್ಟೇ ಬೇಗ ದೂರ ಮಾಡಿಕೊಳ್ಳ ಬಲ್ಲ; ದುಃಖಿಯನ್ನು ದೇವನೊಂದಿಗೆ ಪುನರ್ವಿವಾಹ ಮಾಡುವುದೇ ದುಃಖ ; ಎಂತಹ ದೊಡ್ಡ ದುಃಖವನ್ನಾದರೂ ಸಹಿಸಬಹುದು - ಅದು ಇತರರಿಗೆ ಒದಗಿದಾಗ ; ದುಃಖವೇ ಆತ್ಮಕ್ಕೆ ಔಷಧಿ - ಇದನ್ನು ಕೊಡುವ ವೈದ್ಯರು ಕಾಸನ್ನು ಬೇಡುವುದಿಲ್ಲ. ದೇವನನ್ನೂ ತೋರುತ್ತದೆ. ದಾರಿಯನ್ನೂ ತಪ್ಪಿಸುತ್ತದೆ. ಸುಖವನ್ನಷ್ಟೇ ದೇವನು ಪುಕ್ಕಟೆಯಾಗಿ ಕೊಡುತ್ತಾನೆ. ದುಃಖವನ್ನು ಮಾನವನು ಹಣಕೊಟ್ಟು ಕೊಳ್ಳುತ್ತಾನೆ.

**ದುಃಖಿ** ದುಃಖಿಯಾಗಿರುವುದಕ್ಕಿಂತಲೂ ದೇವನಿಗೆ ದೊಡ್ಡ ದ್ರೋಹವು ಇನ್ನೊಂದಿಲ್ಲ ; ಸದಾ ಸುಖಿಯೇ ನಿತ್ಯ ದುಃಖಿ ; ಸುಖಿಯಾಗಿರುವ ಅವಿವೇಕಿಗಿಂತಲೂ ದುಃಖಿಯಾಗಿರುವ ವಿವೇಕಿಯು ಮೇಲು ; ದುಃಖಿಯೂ ದುಃಖವನ್ನೊಲ್ಲೆ ಎಂದರೆ ಬೇರಾರು ನುಂಗಬೇಕು ಈ ಸ್ವಾರ್ಜಿತ ಕಹಿ ಗುಳಿಗೆಯನ್ನು ?



**ಧನಿ** ಹೊಟ್ಟೆಯೇ ದೊಡ್ಡ ಧನಿ - ಅದು ದುಡಿಸಿ ಕೊಡುವ ಅನ್ನವೇ ಸಂಬಳ.

**ಧ್ವನಿವರ್ಧಕ ಯಂತ್ರ** ಮೂಕಂ ಕರೋತಿ ವಾಚಾಲಂ ; ಹಲವರು ಸೇರಿ ಕುಡಿದು ಮಾತನಾಡುತ್ತಾರೆ, ಕೆಲವರು ಧ್ವನಿವರ್ಧಕ ಯಂತ್ರದ ಮುಂದೆ ಮಾತನಾಡುತ್ತಾರೆ - ಪಷ್ಟ ಜನರು ಅದೇಕೋ ಈ ಕೆಲವರ ಮಾತನ್ನು ಮಾತ್ರವೇ ಕೇಳುತ್ತಾರೆ !

**ಧನುರ್ವಿದ್ಯೆ** ಧನುರ್ವಿದ್ಯೆ ಮತ್ತು ಮನುಷ್ಯನ ಜೀವನ ಎರಡೂ ಒಂದೇ. ಗುರಿ ಸಾಧಿಸುವುದು ಮುಖ್ಯವಲ್ಲ, ಸಾಧನೆಯ ರೀತಿನೀತಿಗಳು ಮುಖ್ಯ.

**ಧರ್ಮ** ಧರ್ಮಕ್ಕಾಗಿ ಸಾಯುವವರು ಧಾರಾಳವಾಗಿ ಇದ್ದಾರೆ - ಧರ್ಮದಿಂದ ಬಾಳುವವರು ಬೇಕು ; ಧರ್ಮದ ಹೆಸರಿನಲ್ಲಿ ಇನ್ನೊಬ್ಬನನ್ನು ಕೊಲ್ಲುವವನು ಮೊದಲು ಧರ್ಮವನ್ನೇ ಕೊಲ್ಲುತ್ತಾನೆ.

**ಧರ್ಮಪತ್ನಿ** ಧರ್ಮಕ್ಕೆ ಸಿಕ್ಕ ಪತ್ನಿ ; ಧರ್ಮಾವರದ ಸೀರೆ ಉಡುವ ಪತ್ನಿ.

**ಧರ್ಮರಾಯ** ಇತರರ ನಾಲ್ಕೈದಾಂಶ ಭಾಗದ ಹೆಂಡತಿಯನ್ನು ಜೂಜಿನಲ್ಲಿ ಸೋತು ಕಳೆದವನು.

**ಧರ್ಮೇಚಾ** ಧರ್ಮಕ್ಕೆ ಸಿಕ್ಕ ಪುಕ್ಕಟೆ ಚಹಾ ; ಅರ್ಥೇಚಾ, ಕಾಯೇಚಾ ನೋಡಿರಿ.

**ಧೈರ್ಯ** ಧೈರ್ಯವಿದ್ದವರೆ ಏನನ್ನಾದರೂ ಮಾಡಬಹುದು - ಶ್ರೀಮಂತ ಮಾವನ ಮನೆಯಿಂದಲೂ ಹೆಂಡತಿ ಮಕ್ಕಳೊಟ್ಟಿಗೆ ಹೊರಬೀಳಬಹುದು. ಧೈರ್ಯಶಾಲಿಯನ್ನು ನೋಡಬೇಕಾದರೆ ಜೇಲಿಗೆ ಹೋಗು - ಸೋಮಾರಿಯನ್ನು ನೋಡಬೇಕಾದರೆ ಮಠಕ್ಕೆ ಹೋಗು ; ಓಡಿ ಹೋಗಲು ಅಂಜಿ ಅಲ್ಲಿಯೇ

ಸಿಂತವನೂ ಧೈರ್ಯಶಾಲಿಯೇ ; ಧೈರ್ಯವಿರಬೇಕು - ಇಲ್ಲವೇ ಉದ್ದನ ಕಾಲುಗಳಿರಬೇಕು.



**ನಗು** ನಗು, ಜಗತ್ತು ನಿನ್ನೊಡನೆ ನಗುತ್ತದೆ - ಅಳು, ಜಗತ್ತು ನಿನ್ನನ್ನು ನೋಡಿ ನಗುತ್ತದೆ ; ನಕ್ಕರೇನು ಬಂತು - ನಕ್ಕದ್ದೇ ಬಂತು ; ಕೊಲೆ, ದರೋಡೆ, ವಂಚನೆ, ಮೋಸ ಮುಂತಾದವನ್ನೆಲ್ಲಾ ಒಪ್ಪಿಗೊಂಡವರಿದ್ದಾರೆ - ನಗಲು ಬರುವುದಿಲ್ಲವೆಂಬ ಮಹಾಪರಾಧವನ್ನು ಮಾತ್ರ ಒಪ್ಪಿಗೊಂಡವರಿಲ್ಲ ; ವಾರದಲ್ಲಿ ಮೂರು ದಿನಗಳಾದರೂ ನಗುತ್ತ ಇರಬೇಕು - ನಿನ್ನೆ, ಇವತ್ತು ಮತ್ತು ನಾಳೆ ; ನಗಬಲ್ಲವನಿಗೆ ಅಳಲೂ ಬರುತ್ತದೆ - ಬರೀ ಅಳುಬಲ್ಲವನಿಗೆ ನಗೆ ಬಾರದಿರಲೂ ಸಾಕು ; ನಗಿಸುವವನಿಗೆ ನಗುವ ಅಧಿಕಾರವಿಲ್ಲ - ನಶ್ಯದ ಡಬ್ಬಿಯೇ ಸೀನಿದರೆ ಹೇಗೆ ? ಜಾಣನನ್ನು ಕಂಡು ನಗುವ ಅಧಿಕಾರವಿದೆ, ಮೂರ್ಖನೊಬ್ಬನಿಗೆ ; ಓಡುವವನು ಬೀಳುತ್ತಾನೆ, ನೋಡುವವನು ನಗುತ್ತಾನೆ - ಇವನನ್ನು ನೋಡಿ ನಗುತ್ತಾನೆ ತಿಂಮ ; ನಗಲು ಬಾರದವನಿಗೆ ಬದುಕಲು ಬಾರದು - ಸಾಯಲೂ ಬಾರದು ; ಗಟ್ಟಿಯಾಗಿ ನಗುವವನಿಗೆ

ಏನೂ ತಿಳಿದಿಲ್ಲ ; ಹೆಚ್ಚು ನಗುವವನು ಹುಚ್ಚನ ತಮ್ಮ ; ನಗೆಯಿಂದಾಗುವ ದಣಿವೇ ದೇವನ ಸೇವೆ - ಅದರಿಂದಾಗುವ ಹಸಿವು ಆತನ ವರ !

ಹೀಗಿರಬೇಕು



**ನಟ** ಉತ್ತಮ ನಟರು ಹಣ ಕೊಟ್ಟರೆ ದೊರೆಯುತ್ತಾರೆ - ಉತ್ತಮ ಪ್ರೇಕ್ಷಕರು ? ತನ್ನ ಕೈಹಿಡಿದ ಮಡದಿಯನ್ನೇ ಪ್ರೀತಿಸುವವನಿಗಿಂತಲೂ ಒಳ್ಳೆಯ ನಟನಾರು ?

**ನಟರಾಜ** ರಾಜರುಗಳಿಂದ ನಾಟ್ಯವನ್ನಾಡಿಸಿದ ಶೂರ ಸರದಾರ ಪಟೇಲ



**ನಡತೆ** ಒಳ್ಳೆಯ ನಡತೆಯನ್ನು ತಿಳಿಯಲು ಕೆಟ್ಟ ನಡತೆಯ ಪರಿಚಯಬೇಕು.

**ನನ್ನದು** ನನ್ನದು ಎನ್ನುವ ಮಾತು ಜೀವಂತವಿರುವವರೆಗೂ ವಕೀಲನಿಗೆ ಅನ್ನಕ್ಕೆ ಭಯವವಿಲ್ಲ.

**ನಮ್ಮವರು** ಶ್ರೀಮಂತರು ; ಕೊಟ್ಟವರು ಯಮ್ಮವರು - ಕೊಡದವರು ಯಮನವರು ; ಅವರು ಕೊಟ್ಟದ್ದು ನನಗೆ, ಬಚ್ಚಿಟ್ಟಿದ್ದು ನನ್ನ ಮಗನಿಗೆ.

**ನಯಾಪೈಸ** ಅಜ್ಜಿಯ ಹೆಸರು ಬೇಬಿ ಇದ್ದಂತೆ, ಎಷ್ಟು ಹಳೆಯದಾದರೂ ಇನ್ನೂ ಇದು ನಯಾಪೈಸ.

**ನರಕ** ಇಬ್ಬರು ಹೆಂಡಿರಿರುವವನ ಮನೆ; ಅತ್ತೆ ಸೊಸೆ ಇರುವ ಮನೆ, ಹೆಂಡತಿ ಇಲ್ಲದವನ ಮನೆ, ಹೆಂಡತಿ ಇರುವವನ ಮನೆ, ಮುನಿಸಿಪಲ್ ಮೆಂಬರನ ಮನೆ ಇಲ್ಲದ ಓಣಿಯೇ ನರಕ ; ಹೊಸ ಹೆಂಡತಿ, ಹಸಿ ಕಟ್ಟಿಗೆ, ಹಳೆಯ ಹಿಟ್ಟು ಸೇರಿದರೆ ಅತ್ಯುತ್ತಮ ನರಕದ ಸೃಷ್ಟಿಯಾಗುತ್ತದೆ ; ಮದುವೆ, ಸಂಗೀತ ಕಲಿಯುವ ಕನ್ನೆಯ ಮನೆಯ ಸುತ್ತುಮುತ್ತಲಿನ ಮನೆಗಳು ನರಕವೇ ; ದೇವನು ಮೊದಲು ಸೃಷ್ಟಿಸಿದುದು ಸ್ವರ್ಗ, ನರಕ ಮತ್ತು ಪುರುಷ ವರ್ಗ, ನರಕವು ಬರಿದೇ ಉಳಿದು ಸ್ವರ್ಗವು ಕಿಕ್ಕಿರಿದು ಹೋಯಿತು - ಕೂಡಲೇ ಹೆಣ್ಣನ್ನು ಕಳುಹಿದ, ನರಕವು ತುಂಬಿ ಸ್ವರ್ಗವು ಬೀಳು ಬಿದ್ದಿತು -

ಮಗುವನ್ನು ಸೃಜಿಸಿದ, ನರಕ ಸ್ವರ್ಗಗಳೆರಡೂ ಸಮವಾದವು. ಸ್ವರ್ಗಕ್ಕೆ ಬರಬೇಡ ಎನ್ನುವವರಾರೂ ಇಲ್ಲ - ನರಕಕ್ಕೆ ಬಾ ಎನ್ನುವವರು ಅನೇಕರು ಇದ್ದಾರೆ; ನರಕ ಸ್ವರ್ಗಗಳೆರಡೂ ನನ್ನವೇ ಆಗಿದ್ದರೆ, ಸ್ವರ್ಗವನ್ನು ಅರಸಿಕ ಮುಂಡೇವಕ್ಕೆ ಬಾಡಿಗೆಗೆ ಕೊಟ್ಟು ನನ್ನಂತಹರೊಡನೆ ಹಾಯಾಗಿ ನರಕದಲ್ಲಿಯೇ ಇದ್ದುಬಿಡುತ್ತಿದ್ದೆ. ನರಕದಲ್ಲಿ ನರಳುತ್ತಿದ್ದ ತಿಂಮನಿಗೆ ಅಕಸ್ಮಾತ್ತಾಗಿ ಆಚಾರ್ಯರ ದರ್ಶನವಾಯಿತು. ಆಶ್ಚರ್ಯದಿಂದ ಕೇಳಿದ ''ಇದೇನು ಆಚಾರ್ಯರೇ ! ತಾವು !!— ಇಲ್ಲಿ !!—''

''ಉಶ್ !ಮೆಲ್ಲನೆ ಮಾತನಾಡೋ, ನನ್ನ ಗುರುಗಳೂ ಇಲ್ಲಿಯೇ ಪಕ್ಕದ ಕೋಣೆಯಲ್ಲಿ ಇದ್ದಾರೆ''

ನರಕದ ದಾರಿಯಲ್ಲಿ ಸ್ವರ್ಗ ಸುಖವಿದೆ - ಸ್ವರ್ಗದ ದಾರಿಯಲ್ಲಿ ಯಮಯಾತನೆ ಇದೆ ; ನರಕದಲ್ಲಿ ಬೆಳಕು ಇಲ್ಲ, ಮೇಲೆ ವಿಪರೀತ ಸೆಕೆ - ಸದ್ಯ ಎಲೆಕ್ಟ್ರಿಕ್ ಬಿಲ್ ಅಂತೂ ಇಲ್ಲವಲ್ಲ ? ಭೂಲೋಕವೆಂಬ ಸುಖನಿವಾಸ ಹೋಟಲಿಗೆ ರಸಿಕನು ಕೊಡುವ ಬಿಲ್, ನರಕವು ಎಲ್ಲಿದೆ, ಹೇಗಿದೆ ಎಂಬುದನ್ನು ತಿಳಿಯಲು, ಹಾತೊರೆಯುವ ಬದಲು ಅಲ್ಲಿಗೆ ಹೋಗದಿರುವುದು ಹೇಗೆ ಎಂಬುದನ್ನು ತಿಳಿಯುವುದರಲ್ಲಿ ಹೆಚ್ಚು ತಿಳುವಳಿಕೆ ಇದೆ.

**ನಲವತ್ತು** ಪ್ರತಿಯೊಬ್ಬನ ಮೊದಲ ನಲವತ್ತು ವರ್ಷ ಮೂಲ ಗ್ರಂಥ - ನಂತರದೆಲ್ಲವೂ ಅದರ ಟೀಕಾ ; ನಲವತ್ತು ಹೆಂಡತಿ ಸಾಯಬಾರದ ವಯಸ್ಸು.

**ನವಕರಿ** ಹೊಸ ಆನೆ ಅರ್ಥಾತ್ ಶ್ರೀಮಂತ ಮಾವನ ಮಗಳು;

ಹೊರಗೊಂದು ನವಕರಿ, ಮನೆಯಲ್ಲಿ ಮಡದಿ -
ಅವನನ್ನು ಯಾವ ದೇವನು ಕಾಯಬಲ್ಲ ?

**ನವ್ಯಕಾವ್ಯ** ಹಳೆಯದಾದ ದೇವರು, ಸೂರ್ಯ, ಚಂದ್ರ, ಹೆಣ್ಣು, ಸಿನ್ನೆ ಮುಂತಾದವುಗಳ ವರ್ಣನೆ ಇದರಲ್ಲಿ ಬರಕೂಡದೆಂದು ಹಳೆಯ ಸಂಪ್ರದಾಯದ ಕವಿಗಳ ಹೊಸ ಆಕ್ಷೇಪವಿದೆ.

**ನವೆ** ನವೆಯ ಗರ್ಭದಲ್ಲಿ ನೋವೂ ಇದೆ - ಸುಖ ದುಃಖಗಳ ಸಂಬಂಧದಂತೆ.

**ನಸ್ಯ** ನಸ್ಯ ಭಕ್ತರಲ್ಲಿ ಸೇಕಡ ಎರಡೂವರೆ ಜನರು ಸ್ವಂತ ಡಬ್ಬಿ ಇಡುತ್ತಾರೆ - ಉಳಿದ ತೊಂಭತ್ತೇಳುವರೆ ಜನರು ಈ ಡಬ್ಬಿಗಳನ್ನು ಖಾಲಿ ಮಾಡುತ್ತಾರೆ. ಒಬ್ಬನನ್ನು ಉಸಿರುಕಟ್ಟಿ ಸಾಯುವಂತೆ ಮಾಡಲು ಅವನನ್ನು ಗಾಳಿಯೇ ಇಲ್ಲದ ಕೋಣೆಯಲ್ಲಿ ತಂದು ಹಾಕಬೇಡ - ನಸ್ಯದ ಡಬ್ಬಿಯನ್ನು ಕಸಿದುಕೊಂಡು ಸಮುದ್ರದ ದಡದ ಮೇಲೆ ತಂದು ಬಿಡು, ಅವನೊಬ್ಬ ನಸ್ಯದ ದಾಸನಾಗಿದ್ದರೆ ; ಸಿಗರೇಟು ನೋಡಿರಿ.

**ನಳಚರಿತ್ರೆ** ಎಲ್ಲರ ಉಪಯೋಗಕ್ಕೆಂದು ನಾಲ್ಕು ರಸ್ತೆ ಸೇರುವಲ್ಲಿ ಒಂದು ನಳವನ್ನಿಟ್ಟಿದ್ದರು. ಒಬ್ಬ ಮೂರ್ಖರಾಯ ಮುನಿಸಿಪಲ್ ಮೆಂಬರನಾದ, ಮರುದಿನವೇ ಅದು ಅವನ ಮನೆಯ ಮುಂದೆ ಸ್ಥಾಪಿತವಾಯಿತು. ಮುಂದಿನ ಚುನಾವಣೆಯಲ್ಲಿ ಇನ್ನೊಬ್ಬ ಮೂರ್ಖ ಗೌಡ ಮೆಂಬರನಾದ, ಮರುದಿನವೇ ಆ ನಳವು ಇವನ ಮನೆಯ ಮುಂದೆ ಬಂದು ನಿಂತಿತು. ಚುನಾವಣೆಯಾದಂತೆಲ್ಲ ಅಲ್ಲಿಂದಿಲ್ಲಿಗೆ ಇಲ್ಲಿಂದಿಲ್ಲಿಗೆ ಓಡಾಡಿ ಕಡೆಗೊಂದು ದಿನ ಆ ನಳವು ಮುರಿದೇ ಹೋಯಿತು. ಇತಿ ನಳಚರಿತ್ರಾ ಸಂಪೂರ್ಣಂ.

**ನಾಚಿಕೆ** ಹಸಿದ ಹೊಟ್ಟೆಗೆ ನಾಚಿಕೆ ಇಲ್ಲ - ತುಂಬಿದ ಹೊಟ್ಟೆಗೆ ನಾಚಿಕೆಯ ನೆನಪೂ ಇಲ್ಲ ; ನಾಚಿಕೆ ಇಲ್ಲದವನಿಗೆ ನಾರಾಯಣನೂ ಅಂಜುತ್ತಾನೆ. ಬತ್ತಲೆ ಇರುವವರ ರಾಜ್ಯದಲ್ಲಿ ಬಟ್ಟೆಯುಟ್ಟವನೇ ನಾಚಬೇಕು. ಬಡತನಕ್ಕೆ ನಾಚುವವನು, ಸಿರಿವಂತಿಕೆಗೆ ಗರ್ವ ಪಡುವವನಿಗಿಂತಲೂ ಹೆಚ್ಚು ಅವಿವೇಕಿ ; ನಾಚಿಕೆಯನ್ನು ಒಂದೇ ಒಂದು ಬಾರಿ ಬಿಟ್ಟರಾಯಿತು - ಮತ್ತೆ ಅದರ ಕಾಟವೇ ಇಲ್ಲ.

**ನಾಟಕ** ಬಾಳಿನಲ್ಲಿ ಕಾಣಲಾರದುದನ್ನೆಲ್ಲ ನಾಟಕದಲ್ಲಿ ನೋಡಬಹುದು - ಉದಾ : ಸ್ವಪತ್ನೀ ಪ್ರೇಮಿ ಪತಿ, ಜಿತಕಾಮಿ ಜಗದ್ಗುರು, ವಿದ್ಯೆಗೂ ಕೂಡ ಗೌರವ, ಅಯೋಗ್ಯನ ಪತನ, ಮಿತಭಾಷಿಣಿಯಾದ ಹೆಂಣು, ಭಾಷಣ ಮಾಡದ ದೇಶಭಕ್ತ, ಅಸೂಯೆ ಅರಿಯದ ಸಾಹಿತಿ, ಕರೆದಾಗ ಬರುವ ದೇವರು, ಕೊನೆಗೆ ಮಂಗಳ ! ನಾಟಕವನ್ನು ನೋಡದೆ ಬಾಳುವುದು, ಕನ್ನಡಿ ಇಲ್ಲದೆ ಕ್ರಾಪು ಬಾಚಿಗೊಂಡಂತೆ; ಸಾವಿನಿಂದ ಸಮಾಪ್ತಿಯಾಗುವ ನಾಟಕಕ್ಕೆ ದುಃಖಾಂತ ನಾಟಕವೆಂದೂ, ಪ್ರಣಯಿಗಳ ಮದುವೆಯಲ್ಲಿ ಪರ್ಯವಸಾನವಾಗುವ ನಾಟಕಕ್ಕೆ ಸುಖಾಂತ ನಾಟಕವೆಂದೂ ಕರೆಯುವ ವಾಡಿಕೆ ಇದೆ. ತಿರುವು ಮುರುವು ಆಗಿದೆ ? ಈ ಮೂರು ಪಾತ್ರಗಳಿಲ್ಲದೆ ನಾಟಕವೇ ಇಲ್ಲ - ಅವನು, ಅವಳು ಮತ್ತು ಇನ್ನೊಬ್ಬ ಅವನು ಅಥವಾ ಅವಳು.

**ನಾಟಕಾಭಿಮಾನಿ** ಪಡದೆ, ಡ್ರೆಸ್ಸು, ಮುಖ್ಯನಾಯಕಿ ಮುಂತಾದುವುಗಳನ್ನು ಅಡವು ಇಕ್ಕಿಗೊಂಡು ಸಾಲ ಕೊಡುವವನು; ಕ್ಯಾಂಪ್ಲಿಮೆಂಟರಿ ಪಾಸು ಪಡೆದು ಸಿತ್ಯಪ್ರೊ ಸಕುಟುಂಬ ಸಪರಿವಾರವಾಗಿ ಆಗಮಿಸಿ ನಾಟಕವನ್ನು ನೋಡುವ ಕಂಪಲ್ಲರಿ ಕಲಾಭಿಮಾನಿ.

**ನಾನು** ನನ್ನ ಏಕಮಾತ್ರ ನಿರಂಕುಶ ಶತ್ರು, ನಾನು ಹೋದರೆ ಸ್ವರ್ಗಕ್ಕೆ ಹೋಗಬಹುದು ಎನ್ನುತ್ತಾನೆ ಬ್ರಹ್ಮ-ನಾನು ಹೋದಮೇಲೆ ನಾನು ನಿಲ್ಲುವ ನೆಲವೇ ಸ್ವರ್ಗ ಎನ್ನುತ್ತಾನೆ ತಿಂಮ, ನಾನು ತಿಳಿಯದ ವಿಷಯವೇ ಇಲ್ಲ ಎನ್ನುವವನ್ನು ಕೊಂದು ಸುಡು-ನಾನು ತಿಳಿಯದುದು ವಿಷಯವೇ ಅಲ್ಲ ಎನ್ನುವವನನ್ನು ಕೊಲ್ಲಬೇಡ, ಹಾಗೆಯೇ ಸುಡು, ನಾನ್ರೋಗ ವಿಲ್ಲದವನು ಸಿಗುವುದು ಕಷ್ಟ, ಸಾಧ್ಯ- ನಾನ್ರೋಗ ವನ್ನು ಗುಣ ಮಾಡಲು ಬಂದವರಲ್ಲಿಯಂತೂ ಆ ರೋಗವಿಲ್ಲದವನು ಸಿಗುವುದು ಅಸಾಧ್ಯ.

**ನ್ಯಾಯ** ಇದು ಯಾರಿಗೆ ಬೇಕಿಲ್ಲ-ಅನುಕೂಲವಾಗುವಂತಿದ್ದರೆ ನ್ಯಾಯವನ್ನು ಬೇಡುವವನು ಕೋರ್ಟಿಗೆ ಹೋದರೆ, ದೇವನನ್ನು ನೋಡುವವನು ಗುಡಿಗೆ ಹೋದಂತೆಯೆ, ನಾವು ನ್ಯಾಯವನ್ನು ಅಪೇಕ್ಷಿಸುವುದು ಏತಕ್ಕೆ ? ನಮಗೆ ಅನ್ಯಾಯವಾದೀತೆಂಬ ಭಯದಿಂದ !

**ನಾಯಕ** ನಾಯಕನು ನಾಯಿಯಾಗಲು ಬಹುಕಾಲ ಬೇಕಿಲ್ಲ-ಬಂದೇ ಬಂದೀತು ಮುಂದಿನ ಚುನಾವಣೆ.

**ನಾಯಿ** ಸಾಯುತ್ತಿರುವ ನಾಯಿಯನ್ನು ಮನೆಗೆ ತಂದು ಸಾಕಿದರೆ ಅದು ಕೈ ಕಚ್ಚುವುದಿಲ್ಲ-ಇದೊಂದೇ ಭೇದ ನಾಯಿಗೂ ಮನುಷ್ಯನಿಗೂ, ನಾಯಿಗೆ ಮೈ ನವೆ ಇರುವುದೇ ಒಳ್ಳೆಯದು-ಇಲ್ಲವಾದಲ್ಲಿ ಅಯ್ಯೋ! ಮನುಷ್ಯನ ಅನ್ನ ತಿಂದು ಬಾಳಬೇಕಾದ ಗತಿ ಬಂದಿತೇ ಎಂದು ಅನುಗಾಲವೂ ಯೋಚಿಸುತ್ತಿತ್ತು:ಮನೆಯನ್ನು ನಾಯಿ ಹಗಲು ಕಾಯುತ್ತದೆ-ರಾತ್ರಿ ಯಜಮಾನನು ನಾಯಿಯನ್ನು ಕಾಯುತ್ತಾನೆ, ಕಳ್ಳನು ಅದನ್ನು ಒಯ್ಯಾನೆಂದು:

ಹೆಂಡತಿಗೂ ನಾಯಿಗೂ ಒಂದೇ ಭೇದ-ನಾಯಿ ಯಜಮಾನನನ್ನು ಕಂಡು ಬೊಗಳುವುದಿಲ್ಲ; ಮನುಷ್ಯನು ತನ್ನ ವರ್ಗವನ್ನು ಹೆಚ್ಚು ಹೆಚ್ಚು ತಿಳಿದಂತೆಲ್ಲ ನಾಯಿಯನ್ನು ಹೆಚ್ಚು ಹೆಚ್ಚು ಪ್ರೀತಿಸುತ್ತಾನೆ; ಕೆಲವರಿಗೆ ಮಕ್ಕಳಿಕಿಂತಲೂ ನಾಯಿಯೇ ಹೆಚ್ಚು-ಇನ್ನೂ ಕೆಲವರಿಗೆ ಮಕ್ಕಳೂ ಹೆಚ್ಚಲ್ಲ, ನಾಯಿಯೂ ಹೆಚ್ಚಲ್ಲ.

**ನಾರದ** ಎಷ್ಟು ದಿನಗಳು ಸ್ನಾನವಿಲ್ಲದಿದ್ದರೂ ನಾರದ ಮೈ ಉಳ್ಳವನೇ ನಾರದ.

**ನಾರಿ** ನಾರುವವಳೇ ನಾರಿ; ನೀರು, ನಾರಿ ಎರಡೂ ಅಷ್ಟೇ-ಸರಿಯಾಗಿ ಉಪಯೋಗಿಸಿದರೆ ಸ್ವರ್ಗಸುಖ ಕೊಡುತ್ತವೆ, ಇಲ್ಲವಾದರೆ ಸ್ವರ್ಗಕ್ಕೇ ಕಳಿಸುತ್ತೇವೆ.

**ನಾಲಗೆ** ನಾಲಗೆಗೆ ಕೆಲಸ ಕೊಡುವ ಮುನ್ನ ಈ ಮೂರು ಪ್ರಶ್ನೆಗಳನ್ನು ಕೇಳಿಕೊ-ನಾನು ಆಡಲಿರುವುದು ಸತ್ಯವೆ? ಅವಶ್ಯಕವೆ? ಹಿತವೆ? ಹೆಚ್ಚು ಕೆಲಸ ನಾಲಿಗೆಗೆ ಆದ ಕೂಡಲೆ ಮಿದುಳು ವಿಶ್ರಾಂತಿ ಪಡೆಯುತ್ತದೆ:ತೇವವಾದ ಸ್ಥಳದಲ್ಲಿಯೇ ನಾಲಿಗೆಯು ಓಡಾಟ-ಜಾರುವ ಸಂಭವ ಹೆಚ್ಚು:ನಾಲಿಗೆಗೆ ಅಧಿಕಾರ ಕೊಡು-ಹಲ್ಲಿನ ಬೇರನ್ನೂ ಅಲುಗಾಡಿಸುತ್ತದೆ : ಕೈ ಗಿಡ್ಡವಾಗಲಿಕ್ಕೆ ನಾಲಗೆ ಉದ್ದವಾಗುವದೇ ಕಾರಣ: ಬೇರಿನ್ನಾವ ರೀತಿಯಿಂದಲೂ ಹೇಳಲು ಸಾಧ್ಯವಿಲ್ಲದಾಗ ಹೆಂಣು ಗಂಡಿಗೆ ನಾಲಿಗೆಯಿಂದಲೇ ಹೇಳಿ ಬಿಡುತ್ತದೆ: ಜಂಗು ಹಿಡಿಯಲಾರದ ಏಕ ಮಾತ್ರ ಬಿಡ್ತ-ಹೆಂಣಿನ ನಾಲಗೆ: ಲಗಾಮು ಇಲ್ಲದ ನಾಲಗೆ ಕತ್ತೆಯಾಗಲು ಬಹು ಹೊತ್ತು ಬೇಕಿಲ್ಲ: ತುಂಬಿದ ತಲೆಯಲ್ಲಿನ ನಾಲಗೆ ತೆಪ್ಪಗೆ ಬಿದ್ದಿರುತ್ತದೆ:ಸುಮ್ಮನಿರಲು ಬಾರದ ನಾಲಿಗೆಗೆ ಮಾತನಾಡಲೂ ಬರುವುದಿಲ್ಲ:

ದೇವನು ಒಳ್ಳೆಯವನಿಗೆ ಒಳ್ಳೆಯ ನಾಲಗೆ ಕೊಡುತ್ತಾನೆ-ಕೆಟ್ಟವನಿಗೆ ಗಟ್ಟಿ ಬೆನ್ನು ಕೊಡುತ್ತಾನೆ: ನಾಲಗೆಗೆ ಮೂಳೆ ಇಲ್ಲ-ಮೂಳೆ ಮುರಿಸುವ ಶಕ್ತಿ ಮಾತ್ರ ಇದೆ: ಸೋಮಾರಿಯ ನಾಲಗೆ ಎಂದೂ ಸೋಮಾರಿಯಲ್ಲ:ಒಂದು ನಾಲಗೆ ಜಾರುವ ಬದಲು ಎರಡೂ ಕಾಲು ಜಾರುವುದು ಮೇಲು.

**ನಾಲ್ಕು** ನಾಲ್ಕು ಜನರಿಗೆ ಬೇಕಾದವನು-ಭುಜವೇರಿದವನು.



**ನ್ಯಾಪನಲೈಜೇಷನ್** ನಾಶನಲೈಜೇಷನ್!

**ನಾಸ್ತಿಕ** ನಾಸ್ (ನಸ್ಯ) ಮೂಗಿಗೇರಿಸಿ ಅದೇ ಬೆರಳನ್ನು ತಿಕದ ಮೇಲೆ ಸವರಿಕೊಳ್ಳುವವನು.

**ನಾಳೆ** ನಾಳೆ ಎನ್ನುವವನಕಿಂತಲೂ ನಡೆ ಎನ್ನುವವನು ಹೆಚ್ಚು ಉಪಕಾರ ಮಾಡುತ್ತಾನೆ: ನಾಳೆ ಎನ್ನುವ ಶಬ್ದದ ಹುಟ್ಟು ಅಕ್ಕ ಸಾಲಿಗನ ಅಗ್ಗಿಷ್ಟಿಕೆಯಲ್ಲಿಯೋ, ಅಥವಾ ಸಿಂಪಿಗನ ಸೂಜಿಯಲ್ಲಿಯೋ ಎಂಬುದು ಇನ್ನೂ ಪತ್ತೆಯಾಗಿಲ್ಲ.

**ನಿಜ** ನಿಜವನ್ನು ಕೂಡ ರುಜು ಮಾಡಿ ತೋರಿಸಬಹುದು.

**ನಿದ್ರೆ** ತಾತ್ಕಾಲಿಕ ಮರಣ-ನಿದ್ರೆಯನ್ನು ಆದರಿಸುತ್ತಾರೆ, ಸಾವಿಗೆ ಅಂಜುತ್ತಾರೆ ಮೂರ್ಖರು ! ಸುಖನಿದ್ರೆ ಬಯಸುವವನು ದಿವಾಳಿಖೋರನ ಹಾಸಿಗೆ ಕೊಳ್ಳಬೇಕು ; ಗಲಭೆಯಲ್ಲಿ ನಿದ್ರೆ ಮಾಡುವ ಅಭ್ಯಾಸವಿದ್ದವನಿಗೆ ನಿಶ್ಶಬ್ದವಾದ ಕೂಡಲೆ ಎಚ್ಚರವಾಗುತ್ತದೆ ; ಚಿಂತೆ ಇಲ್ಲದವನು ಸಂತೆಯಲ್ಲಿಯೇ ನಿದ್ರಿಸುತ್ತಾನೆ:ನಿದ್ರೆ ಬರುವುದೇನು ಸಾಮಾನ್ಯ ಘಟನೆಯೇ-ಇಡೀ ದಿನವೆಲ್ಲ ಅದಕ್ಕಾಗಿ ಕಾದರೆ ರಾತ್ರಿ ಬಹು ತಡವಾಗಿ ಬರುತ್ತದೆ.

**ನಿದ್ರೆ ಗುಳಿಗೆ** ಹೆಂಡತಿ ಸತ್ತವನಿಗೆ ನಿದ್ರೆಗುಳಿಗೆ ಏಕೆ ?

**ನಿರಾಶಾವಾದಿ** ಹೆಂಡತಿ ಸತ್ತಾಗಲೂ ಕೂಡ ಅಳುವವನು:ದೇವನು ನಗುಮುಖವನ್ನಿತ್ತಿದ್ದರೂ ಅಳು ಮುಖ ಮಾಡಿ ಕನ್ನಡಿಯಲ್ಲಿ ನೋಡುವವನು: ಮನಸ್ಸಿಗೆ ಅಜೀರ್ಣವಾದಾಗ ಮನುಷ್ಯನು ನಿರಾಶಾವಾದಿಯಾಗುತ್ತಾನೆ:

ಕಾದಿರುವ ಎರಡು ಕೆಡುಕುಗಳಲ್ಲಿ ಯಾವುದು ಬೇಕು
ಎಂದರೆ ಎರಡೂ ಇರಲಿ ಎನ್ನುವವನು;
ತಿನ್ನಲು ಆಹಾರದ ಹೊರತು ಬೇರೊಂದಿಲ್ಲ
ಉಸಿರಾಡಲು ಗಾಳಿಯ ಹೊರತು ಬೇರೊಂದಿಲ್ಲ
ಇರಲು ಬಂಗಲೆಯ ಹೊರತು ಬೇರೊಂದಿಲ್ಲ
ಧರಿಸಲು ಬಟ್ಟೆಯ ಹೊರತು ಬೇರೊಂದಿಲ್ಲ
ಮಾಡಲು ಕೆಲಸದ ಹೊರತು ಬೇರೊಂದಿಲ್ಲ
ಹೋಗಲು ಹೊರಗಿನ ಹೊರತು ಬೇರೊಂದಿಲ್ಲ
ಬದುಕಿರಬೇಕು ಅಯ್ಯೋ !
ಎಂದು ಗೋಳಾಡುವವನು.

**ನಿರೀಶ್ವರವಾದಿ** ಕತ್ತಲಾದಂತೆಲ್ಲ ನಿರೀಶ್ವರವಾದಿಗೆ ದೇವನಲ್ಲಿ ನಂಬಿಕೆ ಮೂಡಲು ಸುರುವಾಗುತ್ತದೆ.

**ನಿಶ್ಶಬ್ದ** ಎಲ್ಲ ಶಬ್ದಗಳ ಕೊನೆ ನಿಶ್ಶಬ್ದ - ನಿಶ್ಶಬ್ದಕ್ಕೆ ಮಾತ್ರ ಕೊನೆ ಇಲ್ಲ.

**ನೀಚ** ಮಾನವ ಕಲ್ಪನೆಗೆ ಮೀರಿದ ನೀಚ ಕೃತ್ಯಗಳೂ ಇವೆಯಂತೆ, ಇವನ್ನು ಮಾಡಲು ಹೆಣ್ಣಲ್ಲದೆ ಮತ್ತಾರಿಗೂ ತಾನೆ ಸಾಧ್ಯ - ಮಾನವ ಕಲ್ಪನೆಗೆ ಮೀರಿದ ಉತ್ತಮ ಕೃತ್ಯಗಳೂ ಇವೆಯಂತೆ, ಇವನ್ನೂ ಮಾಡಲು ಹೆಣ್ಣಲ್ಲದೆ ಮತ್ತಾರಿಗೆ ತಾನೆ ಸಾಧ್ಯ

**ನೀತಿ** ಬಡವನ ವಕೀಲ; ಬಹು ಬೆಲೆಯ ಭೋಗ್ಯವಸ್ತು: ಹೇಳುವವನ ಬಾಯಿಯಲ್ಲಿ ಹುಟ್ಟಿ ಕೇಳುವವನ ಕಿವಿಯಲ್ಲಿ ಸಾಯುತ್ತದೆ.

**ನೀನು** ನಾನು ಎನ್ನುವವನು ದುಃಖದ ಅಡಿಪಾಯದಲ್ಲಿ ಕೂಡುತ್ತಾನೆ-ನೀನು ಎನ್ನುವವನು ಸುಖದ ಶಿಖರ ವನ್ನೇರುತ್ತಾನೆ.

**ನೀರಾ** ದ್ರವರೂಪದಲ್ಲಿರುವ ಹೆಂಡದ ತತ್ತಿ.

**ನೀರು** ಹಾಲಿನೊಡನೆ ಹೊಂದಿಕೊಳ್ಳುವ ಗರತಿ: ನೀರಿನ ಬೆಲೆ ತಿಳಿಯಲು ಬಾಯಿ ಮಾತ್ರ ಒಣಗಿದರೆ ಸಾಲದು-ಬಾವಿಯೂ ಒಣಗಬೇಕು: ನೀರು ಅತ್ಯುತ್ತಮವಾದ ಪಾನೀಯ-ಅಥಿತಿಗಳಿಗೆ ಹೇರಳವಾಗಿ ಕೊಡಬಹುದು !

**ನೂರು** ನೂರು ವರ್ಷಗಳು ಬಾಳಿದವರಲ್ಲಿ ಎರಡೇ ಜಾತಿಗಳು-ಮಧ್ಯಪಾನ ಮಾಡುತ್ತಿದ್ದವರು ಮತ್ತು ಮಾಡದಿದ್ದವರು.

**ನೆನಪು** ಮರೆವು ದೇವನ ಸೃಷ್ಟಿ,ನೆನಪು ದೆವ್ವದ ಸೃಷ್ಟಿ-ಮರೆವು ಬೇಕಾದುದೆಲ್ಲವೂ ನೆನಪಿನಲ್ಲಿ ಉಳಿಯುವುದೇ ದೇವನ ಅಪಜಯ.

**ನೆಪ** ಸುಳ್ಳಿನಕಿಂತಲೂ ನೆಪವು ಹೆಚ್ಚು ಕೆಟ್ಟದ್ದು-ಸುಳ್ಳನ್ನು ಕಾಪಾಡಲು ಇದು ಹುಟ್ಟುತ್ತದೆ: ಎಂತಹ ಒಳ್ಳೆಯ ಕೆಲಸವೇ ಆಗಲಿ-ಮಾಡಲು ಕಾರಣವಿದೆ, ಬಿಡಲು ನೆಪವೂ ಇದೆ.

**ನೆರೆಹೊರೆ** ನಿನ್ನ ತಪ್ಪುಗಳನ್ನು ತಿಳಿಯಬೇಕಾದರೆ ನಿನ್ನ ನೆರೆ ಹೊರೆಯನ್ನು ಕೇಳಿನೋಡು.

**ನೆಲ** ಗೋಪುರವು ಎಷ್ಟು ಎತ್ತರವಿದ್ದರೂ ನೆಲದಿಂದಲೇ ಏಳಬೇಕು.

**ನೊಣ** ಇತರರಿಗೆ ನಷ್ಟಮಾಡುವ ಸಲುವಾಗಿಯೇ ಅವರ ಚಹಾದಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಾಣಿ.

**ನೋಡಬೇಕಾದವು** ನೋಡಬೇಕಾದವು ನೂರೆಂಟು ಇವೆ-ಹೋಗಿ ನೋಡಬೇಕಾದುದು ಒಂದೂ ಇಲ್ಲ.

**ನೋವು** ನೋವು ಎಷ್ಟೇ ಹೆಚ್ಚಲಿ - ಸಾವಿಗಿಂತ ನೋವೇ ಮೇಲು; ಪಾಪವು ಕೊಡುವ ಸುಖವೇ, ನೋವು - ಪುಣ್ಯಕ್ಕೆ ಕೊಡಬೇಕಾದ ತೆರಿಗೆಯೇ ನೋವು ನೋವಿನಿಂದ ಪಾರಾಗಲು ಒಂದೇ ಉಪಾಯ - ಅದನ್ನು ಲಕ್ಷಣವಾಗಿ ಸಹಿಸಿಬಿಡು ; ನೋವು ಇನ್ನೂ ಹಸಿ ಇರುವಾಗ ಅದಕ್ಕೆ ಮಾಡುವ ಉಪಶಾಂತಿಯಿಂದಲೇ ಅದು ಹೆಚ್ಚಾಗುತ್ತದೆ.

**ನಂಬಿಕೆ** ಮೋಸದ ತಾಯಿ.

**ನಂಬು** ತಿಳಿಯಲಾರದುದನ್ನು ನಂಬುವವನೇ ಜಾಣ: ಬುದ್ಧಿ ಬರುವವರೆಗೂ ತನ್ನಲ್ಲಿ ತಾನು ಹೆಚ್ಚು ನಂಬಿಕೆ ಇಟ್ಟು ಕೆಡುತ್ತಾನೆ-ಬುದ್ಧಿ ಬಂದ ನಂತರ ಇತರರಲ್ಲಿ ಕೊಂಚ ಅಪನಂಬಿಕೆ ತೋರಿಸಿ ಕೆಡುತ್ತಾನೆ: ನಂಬದೆ ಇರುವವನನ್ನು ಮೋಸ ಮಾಡಿದವನೇ ಇಲ್ಲ ; ದೇವನನ್ನೂ ಅತಿಯಾಗಿ ನಂಬಬೇಡ - ನಿನ್ನ ಕೆಲಸವನ್ನು ನೀನು ಮಾಡು ; ಕುದುರೆಯ ಹಿಂಗಾಲು, ನಾಯಿಯ ಹಲ್ಲು, ಹೆಂಗಸಿನ ಮನಸ್ಸು, ಈ ಮೂರನ್ನು ನಂಬು - ಮೋಸ ಹೋಗಲು ಸಿದ್ಧವಾಗಿರು. ಯಾರನ್ನಾದರೂ ನಂಬು - ಅಪರಿಚಿತರನ್ನು ನಂಬಬೇಡ ಎಂದು ಹೇಳಿಕೊಡುವವನೊಬ್ಬನನ್ನು ಬಿಟ್ಟು.



**ಪ್ರಕೃತಿ** ಪ್ರಕೃತಿ ಮತ್ತು ಹೆಣ್ಣು ಎರಡೂ ಒಂದೆ-ಇವನ್ನು ಗೆಲ್ಲಲು; ಒಂದೇ ಉಪಾಯ, ಮೊದಲು ಇವಕ್ಕೆ ನೀನು ಸೋಲಬೇಕು.

**ಪ್ರಚಾರಕ** ತಾನು ಆಚರಣೆಯಲ್ಲಿ ತರಲಾರದುದನ್ನು ಇತರರಿಗೆ ಉಪದೇಶ ಮಾಡುವವನು-ಉದಾ: ಕೋಳಿಯ ಸಾರು ಕುಡಿದು ಪ್ರಾಣಿ ದಯಾಪ್ರಚಾರ ಮಾಡುವವನು, ಹೆಂಡತಿಯನ್ನು ಹೊಡೆದು ಬಂದು ಮಹಿಳಾ ಉದ್ಧಾರದ ಮೇಲೆ ಉದ್ದುದ್ದ ಮಾತನಾಡುವವನು, ಹರಿಜನಕೇರಿಯಲ್ಲಿ ಗಾಂಧೀಜಯಂತಿ ಆಚರಿಸಿ ಮನೆಗೆ ಬಂದು ಜನಿವಾರವನ್ನು ಬದಲಿಸುವವನು, ಇತ್ಯಾದಿ ಇತ್ಯಾದಿ.

**ಪ್ರಜಾಪ್ರಭುತ್ವ** ಮದುವೆ ಇದ್ದಂತೆ-ಇಲ್ಲದಿದ್ದರೆ ಸುಖವಿಲ್ಲ, ಇದ್ದರೆ ಕಷ್ಟವಿದೆ.

**ಪ್ರಜಾಭಿಪ್ರಾಯ** ಕ್ರಿಸ್ತನ ಕೊಲೆಯಾದುದು ಪ್ರಜಾಭಿಪ್ರಾಯದಿಂದಲೆ.

**ಪ್ರಜಾರಾಜ್ಯ** ಒಳ್ಳೆಯವರಾಗದಷ್ಟು ಜಾಣ ಮುಖಂಡರು, ಅವರನ್ನು ನಂಬಲಾರದಷ್ಟು ಬುದ್ಧಿವಂತ ಪ್ರಜೆ ಸೇರಿದರೆ ಪ್ರಜಾರಾಜ್ಯಕ್ಕೆ ಸುಖ.

**ಪ್ರಜಾಸತ್ತೆ** ಪ್ರಜೆ ಸತ್ತೆ ಸತ್ತೆ ಎನ್ನುವಂತೆ ಮಾಡುವ ರಾಜಕಾರಣಿಯ ಒಂದು ಉಪಾಯ.

**ಪ್ರಜಾಸರಕಾರ** ಬಹು ಸಂಖ್ಯಾಕರಾದ ದಡ್ಡರು ಬಹು ದಡ್ಡತನದಿಂದ ಅತಿ ದಡ್ಡರನ್ನು ಆರಿಸಿ, ದಡ್ಡರಲ್ಲದವರನ್ನು ಆಡಳಿತೆಗೆ ಒಳಪಡಿಸಿಕೊಳ್ಳುವ ಒಂದು ಸಂಚು.

**ಪಟೇಲ** ಕುಲಕರ್ಣಿಯ ಸರಕಾರೀ ಸವತಿ ; ಪಟೇಲ ಮತ್ತು ಕುಲಕರ್ಣಿ ಒಂದಾದರೆ ಅರ್ಧನಾರೀ ನಟೇಶ್ವರನ ಎರಡು ಮುಖಗಳಾದ ಪಾರ್ವತಿ ಪರಮೇಶ್ವರರಲ್ಲಿಯೆ ಪಾರ್ಟಿಗಳಾಗುತ್ತವೆ.

**ಪ್ರಣಯ** ಆತ್ಮವಂಚನೆಯಿಂದ ಆರಂಭ - ಪರಿಸಮಾಪ್ತಿ ಪರವಂಚನೆಯಿಂದ; ಕೆಲಸವು ಇಲ್ಲದಾಗ ಆಡುವ ಆಟ-ಆಟವು ಸಾಕಾದಾಗ ಮಾಡುವ ಕೆಲಸ; ಪ್ರಣಯ ಮತ್ತು ಕೆಮ್ಮು ಒಂದೇ ಜಾತಿಯ ರೋಗಗಳು-ನೋವಿಗಿಂತಲೂ ಗಲಾಟೆಯೇ ಹೆಚ್ಚು; ಗುಟ್ಟಾಗಿರುವವರೆಗೇ ಆನಂದ; ಪ್ರಣಯವನ್ನು ಪ್ರಾರಂಭಿಸುವದು ಗಂಡಿನ ಕೈಯಲ್ಲಿದೆ-ಪರಿಸಮಾಪ್ತಿ ಮಾಡುವದು ಹೆಣ್ಣಿನ ಮುಖದಲ್ಲಿದೆ; ಪ್ರಣಯ ಮತ್ತು ಕಾಫಿ, ಬಿಸಿ ಇದ್ದರೇ ರುಚಿ-ಹೊಸತು ಇದ್ದರೇ ಬಿಸಿ; ಪ್ರಣಯವೂ ಕಾಫಿಯಂತೆ-ಮೊದಲು ಗುಟುಕು ಮಾತ್ರವೆ ಬಿಸಿ, ಬರಬರುತ್ತ ಎರಡೂ ತಂಣಗಾಗುತ್ತವೆ; ಪ್ರಣಯವ್ರೋ ಪ್ರಾರಂಬ್ಧವ್ರೋ ಮರಣಕ್ಕೆ ಅದೆಷ್ಟೋ ಕಾರಣಗಳು; ಗಂಡಿನ ಜೀವನದಲ್ಲಿ ಪ್ರಣಯವು ಒಂದು ಮಾಮೂಲು ಘಟನೆ-ಹೆಣ್ಣಿಗೆ ಅದೇ ಬಾಳಿನ ಕತೆ. ಪ್ರಣಯದಲ್ಲಿ ಒಂದೇ ಸ್ವಾರಸ್ಯ—ಪ್ರಣಯವು ಮುಗಿದ ನಂತರ ಅದರಲ್ಲೇನೂ ಸ್ವಾರಸ್ಯವಿಲ್ಲ ಎನಿಸುತ್ತದೆ.

**ಪ್ರಣಯಿ** ಪ್ರಣಯಿಗಳು ಒಂದೇ ಬಾರಿಗೆ ಎರಡು ತಪ್ಪುಗಳನ್ನು ಮಾಡುತ್ತಾರೆ — ತಮಗೆ ಕಣ್ಣು ಇವೆ ಎಂದು

ತಿಳಿಯುತ್ತಾರೆ, ಇತರರಿಗೆ ಇಲ್ಲವೆಂದೂ ತಿಳಿಯುತ್ತಾರೆ; ಅವಿವೇಕಿಯಾಗದ ಪ್ರಣಯಿ-ಸಿಹಿ ಇರದ ಸಕ್ಕರೆ.

**ಪತ್ರ** ಪತ್ರ ಮತ್ತು ಗಜ್ಜಿ - ಗೀಚಿದಷ್ಟೂ ಹೆಚ್ಚಾಗುತ್ತವೆ.

**ಪತ್ರವ್ಯವಹಾರ** ಜಾಣತನದಿಂದ ಸಮಯವನ್ನು ಹಾಳುಮಾಡಲು ಒಂಜೇ ಯೋಗ್ಯ ಉಪಾಯ.

**ಪತಿ** ಪತಿಯೇ ದೇವರು.



**ಪತ್ನಿ** ಉಪನದಿಯನ್ನು ಸಹಿಸಲಾರದ ನದಿ.

**ಪತ್ರಿಕೆ** ಪತ್ರಿಕೆ ಯಾರಿಗೂ ಓದಲು ಅರ್ಹವಲ್ಲ - ಸಾಹಿತ್ಯ

ಎಲ್ಲರಿಗೂ ನಿಲುಕುವುದಿಲ್ಲ; ಹಳೆಯವಾದ ಮೇಲೆಯೆ ಹೆಚ್ಚು ಉಪಯೋಗವಾಗುತ್ತವೆ.

**ಪ್ರತಿಫಲ** ಸತ್ಕಾರ್ಯದ ಪ್ರತಿಫಲಕ್ಕಾಗಿ ಕಾಯಬೇಡ - ದುಷ್ಕಾರ್ಯದ ಪ್ರತಿಫಲ ಹೇಗೂ ಹುಡುಕುತ್ತ ಬರುತ್ತದೆ.

**ಪ್ರತಿಭಾವಂತ** ಕಷ್ಟದ ಕೆಲಸವನ್ನು ಸುಲಭವಾಗಿ ತಪ್ಪಿಸಿ ಗೊಳ್ಳುವವನು.

**ಪತಿವ್ರತೆ** ವೃಥಾ ಪತಿ ಇರುವವಳಿಗೆ ಪತಿವ್ರತೆಯಾಗಿರಲು ಸಾಧ್ಯವೆ? ಅಂತಹ ಪ್ರಸಂಗವೇ ಬಾರದಿದ್ದರೆ ಸೂಳೆಯೂ ಪತಿವ್ರತೆಯಾಗಿಯೇ ಉಳಿಯುತ್ತಿದ್ದಳು; ಪರಪುರುಷರೇ ಇಲ್ಲದ ಊರು ಹೆಣ್ಣನ್ನು ಪತಿವ್ರತೆಯನ್ನಾಗಿ ಮಾಡುವುದಿಲ್ಲ- ಪತಿವ್ರತೆಯನ್ನಾಗಿ ಇಡುತ್ತದೆ, ಅಷ್ಟೆ; ಪತಿಯು ಸತ್ತ ನಂತರರೇ ಪತಿವ್ರತೆಯರಾಗುವವರು ಹೆಚ್ಚು. ಕೆಲವು ಪತಿವ್ರತೆಯರು ಅತಿ ಸ್ವಾರ್ಥಿಗಳಲ್ಲ - ಹಲವು ದಿನಗಳ ನಂತರ ಆ ವ್ರತವನ್ನು ಇತರ ಸ್ತ್ರೀಯರಿಗೆ ಬಿಟ್ಟು ಕೊಡುತ್ತಾರೆ.

**ಪದ್ಯ** ಗದ್ಯದಲ್ಲಿ ಒಂದು ತಪ್ಪಾದರೆ ಸಾಕು, ತಪ್ಪದೆ ಅದು ಪದ್ಯವಾಗುತ್ತದೆ-ಉದಾ: 'ಗ' ಬೀಳುವಲ್ಲಿ 'ಪ' ಬಿದ್ದರೆ ಆಯಿತು.

**ಪದ್ಧತಿ** ಮೊದಲ ದಶಕದಲ್ಲಿ ಆಡಿದೆ, ಇನ್ನೊಂದು ದಶಕದಲ್ಲಿ ಕಲಿತೆ, ಮತ್ತೊಂದು ದಶಕದಲ್ಲಿ ದುಡಿದೆ, ಮುಂದಿನ ದಶಕದಲ್ಲಿ ಸುಖಿಸಿದೆ, ಇನ್ನೊಂದು ದಶಕ ಯೋಚಿ ಸಿದೆ, ಈಗ ನಾನೇನು ಮಾಡಿದರೂ ಅದೇ ಪದ್ಧತಿ.

**ಪ್ರಪಂಚ** ಪ್ರಪ್ರಪ್ರಪ್ರಪ್ರ; ಮೊಟ್ಟಮೊದಲ ಐದು-ಅಮ್ಮ, ಅನ್ನ, ಅರಿಬೆ, ಅಕ್ಷರ, ಅವಳು; ದೇವನು ಮೊದಲು

ಪ್ರತಿಯೊಬ್ಬನಿಗೂ ಒಂದೊಂದು ಪ್ರಪಂಚವನ್ನು ಪ್ರತ್ಯೇಕವಾಗಿಯೆ ನಿರ್ಮಿಸಿದ-ಮೂರ್ಖ ಮಾನವನು ಎಲ್ಲವನ್ನೂ ಸೇರಿಸಿ ಒಂದೇ ನರಕವನ್ನು ಮಾಡಿದ, ಎಲ್ಲರಿಗಾಗಿಯೆಂದು.

**ಪ್ರಭಾವ** ಮೊದಲ ಅಕ್ಕನ ಮೊದಲ ಗಂಡ.

**ಪ್ರಯಾಣ** ಹೆಚ್ಚು ಪ್ರಯಾಣ ಮಾಡಿದವನಿಗೆ ಕಡಿಮೆ ಸುಳ್ಳಾಡುವ ಅವಶ್ಯಕತೆ ಇಲ್ಲ; ಕತ್ತೆ ಪ್ರಯಾಣ ಮಾಡಿದ ಮಾತ್ರಕ್ಕೆ ಕುದುರೆಯಾದೀತೆ ?

**ಪರಸ್ತ್ರೀ** ಪರಸ್ತ್ರೀಯರ ರೂಪು, ಬುದ್ಧಿ, ಚಾತುರ್ಯ, ವಿದ್ಯೆಗಳಿಗೆ ಮೆಚ್ಚುವ ಪುರುಷರು ಊರ ತುಂಬ ಇದ್ದಾರೆ-ಪಾತಿವ್ರತ್ಯಕ್ಕೆ ?

**ಪರಾಕ್ರಮಿ** ಶತ್ರುಗಳಲ್ಲಿ ಅತಿ ಪರಾಕ್ರಮಿ ಸೆರೆ — ಮಿತ್ರರಲ್ಲಿ ಅತಿ ಪರಾಕ್ರಮಿ ಸತಿ.

**ಪರಿವರ್ತನೆ** ಮನುಷ್ಯನಲ್ಲಿ ಪರಿವರ್ತನೆ ಅತಿಯಾದರೆ ಅವನು ಮೊದಲು ಇದ್ದಂತೆಯೆ ಆಗುತ್ತಾನೆ.

**ಪರಿಷತ್ತು** ಒಬ್ಬನ ಉದ್ಧಾರದ ನೆಪದಿಂದ ಮತ್ತೊಬ್ಬನ ಹಣವನ್ನು ತಂದು ಇನ್ನೊಬ್ಬನು ಸೇರಿಸುವ ಸಭೆ — ಉದಾ: ರೈತನ ಉದ್ಧಾರಕ್ಕೆಂದು ವ್ಯಾಪಾರಿಯ ಹಣದಿಂದ ವಕೀಲನು ಸೇರಿಸುವ ಸಭೆ !

**ಪರೀಕ್ಷೆ** ಜಾಣರು ಉತ್ತರಿಸಲಾರದಂತಹ ಪ್ರಶ್ನೆಗಳನ್ನು ದಡ್ಡರು ಕೇಳುವದಕ್ಕೆ ಪರೀಕ್ಷೆಯೆಂದು ಹೆಸರು.

**ಪರೋಪಕಾರಿ** ವ್ಯಭಿಚಾರಿಣಿಯ ಪತಿದೇವ.

**ಪಶ್ಚಾತ್ತಾಪ** ಮಾಡದಿರುವ ತಪ್ಪನ್ನು ಮಾಡಿರುವೆನೆಂದು ಜಂಬಕೊಚ್ಚಿಕೊಳ್ಳಲು ಒಂದು ಅತ್ಯುತ್ತಮ ಉಪಾಯ;ಪಶ್ಚಾತ್ತಾಪಕ್ಕೆ ಮುಖ್ಯವಾದ ಕಾರಣ

ತಪ್ಪು ಮಾಡಿದುದಲ್ಲ-ಮಾಡಿದ ತಪ್ಪು ಹೊರಬಿದ್ದುದು.

**ಪಶು** ಮಾತನಾಡಲು ಬರುವುದರಿಂದ ಮಾನವನು ಪಶುವಿಗಿಂತ ಮೇಲು-ಆಡಬಾರದುದನ್ನು ಆಡಿದಾಗ ಆಡಲು ಬಾರದ ಪಶುವೇ ಮೇಲು

**ಪ್ರಶ್ನೆ** ಎಂತಹ ಜಾಣನಿಗೂ ಉತ್ತರಿಸಲು ಬಾರದಂತಹ ಪ್ರಶ್ನೆಯನ್ನು ಎಂತಹ ಮೂರ್ಖನಾದರೂ ಕೇಳಬಹುದು; ಉತ್ತರಿಸಲು ಬಾರದ ಪ್ರಶ್ನೆಗಳೇ ಹೆಚ್ಚು- ಉದಾ: ಎಂದಿನಿಂದ ನಿನ್ನ ಹೆಂಡತಿಯು ನಿನ್ನನ್ನು ಹೊಡೆಯುವುದನ್ನು ಬಿಟ್ಟಳು; ಇತ್ಯಾದಿ.

**ಪ್ರಳಯ** ಹೆಂಣು ಚಿನ್ನವನ್ನು, ರಾಜಕಾರಣಿ ಅಧಿಕಾರವನ್ನು ಒಲ್ಲೆ ಎಂದ ದಿನವೇ ಪ್ರಳಯವಾಗುತ್ತದೆ.

**ಪಾತಿವ್ರತ್ಯ** ಯೌವನದಲ್ಲಿ ಪಾತಿವ್ರತ್ಯವನ್ನು ಬಿಟ್ಟವಳು, ವೃದ್ಧಾಪ್ಯದಲ್ಲಿ ಅದನ್ನು ಕಳೆದುಕೊಳ್ಳಲೂ ಶ್ರಮಪಡಬೇಕು; ಪತಿಯನ್ನು ಬದಲಾಯಿಸಿದ ಮಾತ್ರಕ್ಕೆ ಪಾತಿವ್ರತ್ಯಕ್ಕೆ ಚ್ಯುತಿ ಉಂಟಾಯಿತೆ ?

**ಪ್ರಾರ್ಥಿಸು** ದುಡಿಯುವಾಗ ಶೂರನಾಗು-ಪ್ರಾರ್ಥಿಸುವಾಗ ಹೇಡಿಯಾಗು; ಪ್ರತಿಯೊಬ್ಬನೂ ದೇವನಲ್ಲಿ ಅಸಾಧ್ಯರಾದುದನ್ನೇ ಪ್ರಾರ್ಥಿಸುತ್ತಾನೆ-ದೇವಾ ! ನಾನು ಎರಡಕ್ಕೆ ಎರಡನ್ನು ಸೇರಿಸುತ್ತೇನೆ, ಅದು ನಾಲ್ಕು ಆಗದಂತೆ ನೀನು ಮಾಡು.

**ಪಾಪ** ಮಾನವನು ದೈವ್ವದಿಂದ ಪಡೆಯುವ ಸಾಲ; ಸಾವಿರ ಪಾಪಗಳನ್ನು ಮಾಡಿ ಪಶ್ಚಾತ್ತಾಪ ಪಟ್ಟವನು ಒಂದೂ ಪಾಪವನ್ನರಿಯದ ಪುಣ್ಯಶಾಲಿಯಕಿಂತಲೂ

ಸಾವಿರ ಪಾಲು ಮೇಲು; ಸತ್ತವನೊಬ್ಬನೇ ಪಾಪವನ್ನು ಮಾಡುತ್ತಿಲ್ಲ; ಅರಿಯದೆ ಮಾಡುವ ಪಾಪವೇ ಪ್ರಗತಿಯ ರಾಜಮಾರ್ಗ; ಪಾಪವು ಇರುವುದು ಮನದಲ್ಲಿ, ಪ್ರಕಟವಾಗುವುದು ಕೃತಿಯಲ್ಲಿ; ಪಾಪಕ್ಕೆ ಜಾರುವುದು ಪಾಪವಲ್ಲ-ಜಾರಿದನಂತರ ಏಳದಿರುವುದು ಪಾಪ; ದೇಹದಿಂದ ಆತ್ಮಕ್ಕೆ ಆಗುವ ಅನ್ಯಾಯವೇ ಪಾಪ; ಪಾಪವು ಮುದ್ದು ಕೊಡುತ್ತದೆ-ಮರಣವನ್ನೂ ಕೊಡುತ್ತದೆ; ಆತ್ಮವು ಬಿಸಲಲ್ಲಿ ಪಕ್ವವಾದರೆ ಪಾಪವೆನ್ನುತ್ತಾರೆ, ನೆಳಲಲ್ಲಿ ಆದರೆ ಪುಣ್ಯವೆನ್ನುತ್ತಾರೆ-ಎರಡೂ ಮಾಡುವ ಕೆಲಸವೇನೋ ಅಷ್ಟೆ.

**ಪಾಪಿ** ಪಾಪಿಯನ್ನು ಕೊಂದರೆ ಪಾಪವನ್ನು ಕೊಂದಂತಾಗಲಿಲ್ಲ.

**ಪ್ರಾಮಾಣಿಕ** ತಾನು ಪ್ರಾಮಾಣಿಕನೆಂದು ಹೇಳಿಕೊಳ್ಳುವ ಗಂಡು, ತಾನು ಪತಿವ್ರತೆಯೆಂದು ಹೆಳಿಕೊಳ್ಳುವ ಹೆಂಣಿನಂತೆ; ಆಸ್ಪದ ದೊರೆಯುವವರೆಗೂ ಪ್ರಾಮಾಣಿಕನಾಗಿರು, ದೊರೆತ ನಂತರ ಪ್ರಾಮಾಣಿಕತೆಯ ಬಗ್ಗೆ ಉಪನ್ಯಾಸ ಮಾಡು.

**ಪ್ರಾಮಾಣಿಕತೆ** ಮುಂಡೇದಕ್ಕೆ ಅಲ್ಪಾಯುಸ್ಸು-ಸಾಲುದಕ್ಕೆ ಸಂತಾನವಿಲ್ಲದೆ ಸಾಯುತ್ತದೆ; ಎಲ್ಲರಿಂದಲೂ ಮೆಚ್ಚುಗೆ ಪಡೆಯುತ್ತದೆ-ಆದರೆ ಅನ್ನವಿಲ್ಲದೆ ಸಾಯುತ್ತದೆ; ಒಂದೊಂದು ಬಾರಿ ಅಪ್ರಾಮಾಣಿಕತೆಯಗಿಂತಲೂ ಪ್ರಾಮಾಣಿಕತೆಯೇ ಹೆಚ್ಚು ಲಾಭದಾಯಕ.

**ಪ್ರಾಯ** ಪ್ರಾಯವು ಕಳೆದ ನಂತರ ಅಭಿಪ್ರಾಯ ಕೊಡುವುದೊಂದೇ ಕೆಲಸ; ತಿಳಿಯಬೇಕಾದುದನ್ನು

ಪ್ರಾಯದಲ್ಲಿ ಕಲಿಯಬೇಕು, ಕಲಿತುದನ್ನು ವೃದ್ಧಾಪ್ಯದಲ್ಲಿ ತಿಳಿಯಬೇಕು.

**ಪ್ರಾರಬ್ಧ** ಗಂಡಿಗೆ ಹೆಂಣು, ಹೆಂಣಿಗೆ ಗಂಡು ಬೇಕಾಗುವುದು ಪ್ರಕೃತಿ ನಿಯಮ-ಗಂಡಿಗೆ ಹೆಂಣುಗಳು, ಹೆಂಣಿಗೆ ಗಂಡುಗಳು ಬೇಕಾಗುವುದು ಪ್ರಾರಬ್ಧ ನಿಯಮ.

**ಪಾರ್ಟಿ** ಕೆಲವೇ ಜಾಣರ ಲಾಭಕ್ಕಾಗಿ ಹಲವಾರು ಮೂರ್ಖರು ಕಟ್ಟುವ ಗುಂಪು.

**ಪಾಶುಪತಾಸ್ತ್ರ** ದನ ಕಾಯುವವನ ಕೈಯಲ್ಲಿರುವ ಬಾರುಕೋಲು.

**ಪಿತೃಭಕ್ತಿ** ಪಿಂಚಿನಿ ಭಕ್ತಿ.

**ಪಿತೃಶೇಷ** ಶೇಷಪ್ಪನ ಮಗ ಅಥವಾ ಮಗಳು.

**ಪುಣ್ಯ** ತೇರು ಎಳೆಯುವುದನ್ನು ನೋಡುತ್ತ ಬಾಳೆ ಹಂಣು ಮಾರಿದರೆ ಪಾಪ-ಬಾಳೆ ಹಂಣು ಮಾರುತ್ತ ತೇರು ಎಳೆಯುವುದನ್ನು ನೋಡಿದರೆ ಪುಣ್ಯ; ದೇವನಿಗೆ ಮಾನವನು ಕೊಡಬೇಕಾದ ಬಾಕಿಯೇ ಪುಣ್ಯ; ಸತ್ತವರ ಮನೆಗೆ ಹೋಗಿ ಅತ್ತು ಬರುವುದೇ ಪುಣ್ಯ—ಬೇಡಾದವರ ಮನೆಗೆ ಹೋಗಿ ಬೇಸತ್ತು ಬರುವುದೇ ಪಾಪ.

**ಪುನರ್ವಿವಾಹ** ಒಡೆದು ತೆಗೆದ ಬೀಗವನ್ನು ರಿಪೇರಿ ಮಾಡಿಸುವುದು.

**ಪುರಾಣ** ಸುಳ್ಳುಗಳಿಲ್ಲದ ಪುಸ್ತಕವನ್ನೋದಲು ಎಲ್ಲರಿಗೂ ತಲೆನೋವು-ಅದಕ್ಕಾಗಿಯೇ ಅನೇಕರಿಗೆ ಪುರಾಣವು ರುಚಿಸುತ್ತದೆ; ಸತ್ತ ಸಂಗತಿ ಚರಿತ್ರೆಯಾಗುತ್ತದೆ - ಸತ್ತ ಚರಿತ್ರೆ ಪುರಾಣವಾಗುತ್ತದೆ.

**ಪುರುಷ** ಪುರುಷನಿಗೆ ತೋಳಬಲ ಬೇಕು-ಸ್ತ್ರೀಯಳಿಗೆ ತಾಳಿಯ ಬಲವೇ ಸಾಕು; ತನ್ನವಳ ವಿಷಯ ಊರಿಗೆಲ್ಲ ಗೊತ್ತು-ಆದರೂ ಪುರುಷ ಮಾತ್ರ ಅರಿಯ; ತತ್ವಜ್ಞಾನಿಗಳು, ಮೇಧಾವಿಗಳು, ಸರ್ವ ಶಾಸ್ತ್ರ ಪಾರಂಗತರು ಕಲಾವಿದರು, ಕವಿಗಳು ಪುರುಷ ವರ್ಗದಲ್ಲಿಯೇ ಹೆಚ್ಚು-ಕಳ್ಳರು ಕೂಡ !

**ಪುರೋಹಿತ** ತನ್ನ ಬಾಲವನ್ನು ಕಳೆದುಕೊಂಡ ಕಾರಣ ಇತರರ ಬಾಲವನ್ನೂ ಕುಯ್ಯಲು ದರ್ಬೆ ಹಿಡಿದು ಕಾದಿರುವ ನರಿ; ಮದುವೆಯಾಗದ ಪುರೋಹಿತ ಊರ ಹೊರಗಿರುವ ಕೈಮರದಂತೆ — ಇತರರಿಗಷ್ಟೇ ದಾರಿಯನ್ನು ತೋರಿಸುತ್ತಾನೆ.

**ಪುಸ್ತಕ** ಹೆಂಣಿನ ಮುಖವೇ ಪುಸ್ತಕವಾದವನಿಗೆ ಷುಚ್ಟಾಸ್ಪತ್ರೆಯೇ ವಿಶ್ವವಿದ್ಯಾಲಯ; ಅತ್ಯುತ್ತಮವಾದ ಪುಸ್ತಕವು ಬರೆದುದಲ್ಲ-ಬಾಳಿದುದು; ಪುಸ್ತಕಗಳಿಲ್ಲದ ಮನೆ, ಮಕ್ಕಳಿಲ್ಲದ ಮನೆಯಂತೆ; ಬಹು ಬೆಲೆಯ ಪುಸ್ತಕವು ಒಂದೇ ಒಂದು-ಬಾಕಿ ಪಟ್ಟಿಯ ಪುಸ್ತಕ; ಮುಂದಿನ ಪೀಳಿಗೆಗೆ ಸಾಹಿತಿ ಕೊಟ್ಟು ಸಾಯುವ ಆಸ್ತಿಯೇ ಪುಸ್ತಕ; ಪುಸ್ತಕಗಳನ್ನು ಕಡವಾಗಿ ಒಯ್ಯುವವರಲ್ಲಿ ಎರಡೇ ಜಾತಿಗಳು-ಮರಳಿ ಕೊಡದವರು, ಆಗಲೆ ಕೊಟ್ಟಿದ್ದೇನೆ ಎನ್ನುವವರು; ಪುಸ್ತಕವನ್ನು ಕಡವಾಗಿ ಕೊಡುವವನು ಮೂರ್ಖ-ಅದು ಮರಳಿ ಬಂದರೆ ತಂದು ಕೊಟ್ಟವನು ಮೂರ್ಖ. ಪುಸ್ತಕಗಳಲ್ಲಿ ನಾಲ್ಕು ಬಗೆ — ರುಚಿ ನೋಡಬೇಕಾದುವು, ಗುಳುಗುಳು ನುಂಗಬೇಕಾದುವು, ಚೆನ್ನಾಗಿ ಜೀರ್ಣಿಸಿಕೊಳ್ಳ

ಬೇಕಾದುವು,ಮತ್ತು ಮೇಜಿನ ಮೇಲೆ ಅಲಂಕಾರಕ್ಕೆ ಕೂಡತಕ್ಕವು-ಕೊನೆಯ ಬಗೆಯದು ಗೀತೆ !

**ಪೂಜಾರಿ** ದೇವನು ಸರ್ವಾಂತರ್ಯಾಮಿ ನಿಜ-ಆದರೆ ಪೂಜಾರಿ ಇರುವಲ್ಲಿ ಇರಲೊಲ್ಲ, ಅದೇಕೊ; ದೇವನಿಗೇ ತಿಳಿಯದೆ ಪೂಜಾರಿ ಹುಟ್ಟಿದನಂತೆ ! ಕ್ರೈಮರ ಊರೊಳಗೆ ನಡೆದು ಬಂದ ದಿನವೇ ಪೂಜಾರಿ ಸ್ವರ್ಗಕ್ಕೆ ಬರುತ್ತಾನೆ; ಪೂಜಾರಿ ಮತ್ತು ಕ್ರೈಮರ ಒಂದೇ-ದಾರಿ ತೋರಿರುವದಷ್ಟೇ ಕೆಲಸ, ಹಿಂದೆ ಬರುವಂತಿಲ್ಲ.



**ಪೇಟೆ** ಮೋಸವನ್ನು ವ್ಯವಹಾರವೆಂದು ಅಧಿಕೃತವಾಗಿ ಒಪ್ಪಿಗೊಳ್ಳುವ ಪವಿತ್ರ ಸ್ಥಳ; ಕಳ್ಳಪೇಟೆ ಹೋದರೆ ಕಷ್ಟವಿಲ್ಲ-ಸುಳ್ಳು ಪೇಟೆಯೂ ಹೋದರೇ ಪೇಟೆಯೇ ಇಲ್ಲದಂತಾಯಿತಲ್ಲ ?

**ಪ್ರೇಮ** ತನ್ನನ್ನು ತಾನೇ ಪ್ರೇಮಿಸಿಗೊಳ್ಳುವವಳು ಧನ್ಯಳು -

ಸವತಿಯ ಕಾಟವಿಲ್ಲ, ವೈಧವ್ಯದ ಅಂಜಿಕೆಯೂ ಇಲ್ಲ;
ನಾನು ಸಾಯುವವರೆಗೂ ನಿನ್ನನ್ನು ಪ್ರೇಮಿಸುತ್ತೇನೆ
ಎನ್ನುವವನಿಗೆ ಗೊತ್ತಿರುತ್ತದೆ- ಇಬ್ಬರಲ್ಲಿ ಒಬ್ಬರ
ಸಾವು ಬಹು ದೂರವಿಲ್ಲ ಎಂಬುದು; ಗಂಡ ಹೆಂಡತಿ
ಪ್ರೇಮಿಸುವುದು ಎರಡೇ ಬಾರಿ- ಮದುವೆಯಾಗುವ
ಮುನ್ನ, ಮತ್ತು ಮೃತ್ಯು ಬಾಗಿಲಿಗೆ ಬಂದಾಗ;
ದಂಪತಿಗಳಲ್ಲಿ ಪ್ರೇಮವು ಶಾಶ್ವತವಾಗಿ
ಉಳಿಯಬೇಕಾದರೆ ಒಬ್ಬರಾದರೂ ಬೇಗ
ಸಾಯಬೇಕು; ಪ್ರೇಮವು ಮೈಲಿ
ಬೇನೆಯಂತೆ-ಜೀವನದಲ್ಲಿ ಎಷ್ಟು ತಡವಾಗಿ ಬಂದರೆ
ಅಷ್ಟು ಕಷ್ಟ; ಪ್ರೇಮವು ಎಂದೂ ದಾರಿ
ತಪ್ಪಿದುದಿಲ್ಲ-ಪ್ರೇಮಿಗಳನ್ನು ದಾರಿ ತಪ್ಪಿಸುತ್ತದೆ,
ಅಷ್ಟೆ; ತನ್ನನ್ನು ತಾನೇ ಪ್ರೇಮಿಸಿಗೊಳ್ಳುವವನು
ಉತ್ತಮ ಕರ್ಮಾರ್ಥಿ, ತನ್ನ ಹೆಂಡತಿಯನ್ನೇ
ಪ್ರೇಮಿಸುವವನು ಮಧ್ಯಮ ಧರ್ಮಾರ್ಥಿ,
ಇನ್ನೊಬ್ಬನ ಹೆಂಡತಿಯನ್ನು ಪ್ರೇಮಿಸುವವನು
ಅಧಮ ಚರ್ಮಾರ್ಥಿ; ಅನೇಕ ಬಾರಿ ಕೊಂಚಕೊಂಚ
ಪ್ರೇಮಿಸುವುದು ಗಂಡಿನ ಅಭ್ಯಾಸ-ಕೆಲವೇ ಬಾರಿ
ಹೆಚ್ಚು ಹೆಚ್ಚು ಪ್ರೇಮಿಸುವುದು ಹೆಣ್ಣಿನ ರೋಗ;
ಗಂಡಿಗೆ ಪ್ರೇಮವು ಅಡಿಕೆ-ಹೆಣ್ಣಿಗೆ ಪ್ರೇಮವೇ ಅನ್ನ;
ಹೆಣ್ಣನ್ನು ಪ್ರೇಮಿಸದವನು ಮುರ್ಖನಾಗಿ
ಬಾಳುತ್ತಾನೆ-ಹೆಣ್ಣನ್ನು ಪ್ರೇಮಿಸಿದವನು ಮೂರ್ಖ
ನಾಗಿ ಸಾಯುತ್ತಾನೆ-ಚೆರಣೆಯಲ್ಲಿ ಸುಟ್ಟವನ ಎಮಿಕೆ
ಸಿಗಲಿಕ್ಕಿಲ್ಲ-ಪ್ರೇಮದಲ್ಲಿ ಸುಟ್ಟವನ ಬೂದಿಯೂ
ಸಿಗುವುದಿಲ್ಲ; ಪ್ರೇಮವು ಚಂದ್ರನ ಜಾತಿ-
ಬೆಳೆಯುತ್ತದೆ, ಇಲ್ಲವೆ ಕಳೆಗುಂದುತ್ತದೆ; ಪ್ರೇಮವು
ಕುರುಡಲ್ಲ-ಕಣ್ತೆರೆದು ನೋಡಲು ಅದಕ್ಕೆ

ಸಮಯವಿಲ್ಲ. ಪ್ರೇಮದಿಂದ ಪುಳಕಿತವಾದರೆ ಪಶುವೂ ಪದ್ಯವನ್ನು ಬರೆಯುತ್ತದೆ; ಪ್ರೇಮ ಮತ್ತು ಹುಚ್ಚು-ಒಂದೇ ರೋಗಕ್ಕೆ ಎರಡು ಹೆಸರುಗಳೇಕೆ? ಪ್ರೇಮವು ಬೀಗ ಮುದ್ರೆಗಳನ್ನು ಕಂಡು ಮುಸಿಮುಸಿ ನಗುತ್ತದೆ; ಅಯೋಗ್ಯ ಪಾತ್ರೆಯಲ್ಲಿಟ್ಟರೆ ವಿಷವಾಗುವ ಮಧು; ಕೆಲವರು ಹೆಂಡಂದಿರನ್ನು ಪ್ರೇಮಿಸಿದರೆ ಇನ್ನೂ ಕೆಲವರು ಮದುವೆಗಳನ್ನು ಪ್ರೇಮಿಸುತ್ತಾರೆ-ಮೇಲಿಂದ ಮೇಲೆ ಮದುವೆ ಯಾಗುವವರಿಲ್ಲವೆ? ಆತಂಕವಿದ್ದಷ್ಟೂ ಪ್ರೇಮದ ಬೆಳವಣಿಗೆ ಅತ್ಯದ್ಭುತ; ಮೊಟ್ಟ ಮೊದಲು ಮಾತ್ರ ಹೆಂಣು ತನ್ನ ಪ್ರಿಯತಮನನ್ನು ಪ್ರೇಮಿಸುತ್ತದೆ-ನಂತರ ತನ್ನ ಪ್ರೇಮವನ್ನೇ ತಾನು ಪ್ರೇಮಿಸುತ್ತದೆ; ಗಂಡನ್ನು ಹೆಂಣು ಪ್ರೇಮಿಸಬೇಕು, ಆದರೆ ಪ್ರೇಮಿಸಿದ್ದೇನೆಂದು ಹೇಳಕೂಡದು-ಗಂಡು ಹೆಂಣನ್ನು ಪ್ರೇಮಿಸಕೂಡದು, ಆದರೆ ಪ್ರೇಮಿಸಿದ್ದೇನೆಂದು ಹೇಳಬೇಕು.

**ಪ್ರೇಮಿ** ಅರಸ ಮತ್ತು ಪ್ರೇಮಿ ಏನನ್ನಾದರೂ ಸಹಿಸಬಲ್ಲರು-ಓನ್-ಬೈ-ಟು ಒಂದನ್ನು ಬಿಟ್ಟು.

**ಪ್ರೇಯಸಿ** ಯಾರ ಪ್ರೇಯಸಿಯೂ ಕುರೂಪಿಯಲ್ಲ-ಹೆಂಡತಿಯ ಕಿಂತಲೂ ಬಹು ಚಲುವೆ.

**ಪೋಲಿಸ್** ಪೋಲಿ ಎಂಬ ಕನ್ನಡ ಶಬ್ದದ ಇಂಗ್ಲೀಷ್ ಬಹುವಚನ; ಕಳ್ಳನಾಗುವಷ್ಟು ಒಳ್ಳೆತನವಿಲ್ಲದವನು ಪೋಲೀಸನೇ ಆಗಬೇಕು.

**ಪಂಕಜ** ಕೆಸರಿನಲ್ಲಿ ಹುಟ್ಟಿದುದು - ಉದಾ : ಕಪ್ಪೆ, ಜೊಂಡು ಇತ್ಯಾದಿ

**ಪಂಚಗವ್ಯ** ಸಗಣಿ ತಿನ್ನುವ ಕೆಲಸಮಾಡಿದವರು ಶುದ್ಧೀಕರಣಕ್ಕಾಗಿ ತೆಗೆದುಕೊಳ್ಳುವ ಸಗಣಿ ಮಿಶ್ರಿತ ಡ್ರಿಂಕು.

**ಪಂಚಾಮೃತ** ಹಣ - ಹಣ - ಹಣ - ಹಣ - ಹಣ !

**ಪಂಚಾಯಿತಿ** ಈರ್ವರಿಗೂ ಅತೃಪ್ತಿಯಾಗುವಂತೆ ವ್ಯವಹಾರವನ್ನು ಮುರಿದು ಮುಗಿಸುವ ನಾಟಕ.

**ಪಂಚಾಕ್ಷರಿ** ಏ-ನೂ-ಗೊ-ತ್ತಿ-ಲ್ಲ; ಷಡಾಕ್ಷರಿ ನೋಡಿ.

**ಪಂಡಿತ** ಇನ್ನೊಂದು ಭಾಷೆ, ಬಾರದವ - ಉದಾ:ಇಂಗ್ಲೀಷು ಬಾರದ ಕನ್ನಡ ಪಂಡಿತ, ಕನ್ನಡ ಬಾರದ ತೆಲುಗು ಪಂಡಿತ, ಎರಡೂ ಬಾರದ ಸಂಸ್ಕೃತ ಪಂಡಿತ, ಏನೂ ಬಾರದ ಹಿಂದಿ ಪಂಡಿತ.

**ಪಿಂಡ** ಇರುವವರಕಿಂತಲೂ ಸತ್ತವರೇ ಹೆಚ್ಚು ಪಿಂಡವನ್ನು ತಿನ್ನುತ್ತಾರೆ; ಬದುಕಿರುವವನ ಪಿಂಡವನ್ನು ಸತ್ತವನಿಗೆ ಹಾಕಬೇಡ-ಬದುಕಿದವನೂ ಸತ್ತು ಪಿಂಡಕ್ಕೆ ಕೈಯೊಡ್ಡುತ್ತಾನೆ.



**ಫಲಾಪೇಕ್ಷೆ** ಫಲಾಪೇಕ್ಷೆ ಇಲ್ಲದೆ ಕರ್ಮಮಾಡು ಎನ್ನುತ್ತದೆ ಗೀತೆ-ಚಿಕ್ಕಪುಟ್ಟ ಕನ್ನೆಗಳನ್ನು ವೃದ್ಧರು ಲಗ್ನವಾಗುವುದಿಲ್ಲವೆ ?

**ಫೆಬ್ರವರಿ** ಅತಿಗಿಡ್ಡ ತಿಂಗಳು.

**ಘಂಡು** ಜಗತ್ತಿನಲ್ಲಿ ಎರಡು ಜಾತಿ-ಘಂಡು ಕೂಡಿಸಿ ತಿನ್ನುವ ಖೋಟಾ ಜಾತಿ ಒಂದು, ಆ ಯೋಗ್ಯತೆ ಇಲ್ಲದ ಕಾರಣ ತಿನ್ನುವವರನ್ನು ಬೈಯ್ಯುವ ಸಾಚಾ ಜಾತಿ ಇನ್ನೊಂದು; ಸಾರ್ವಜನಿಕ ದೊಡ್ಡ ಘಂಡು ಮತ್ತು ಮುದುಕನ ಚಿಕ್ಕ ಹೆಂಡತಿ, ಇವನ್ನು ಕಂಡಾಗ ಯಾವನ ಬಾಯಿ ನೀರೊಡೆಯುವುದಿಲ್ಲ? ಘಂಡಿನಷ್ಟು ಪವಿತ್ರವಾದುದು ಮತ್ತಾವುದಿದೆ-ಅದಕ್ಕಾಗಿಯೇ ಎಲ್ಲರೂ ಕೈ ಹಾಕಲು ನೋಡುತ್ತಾರೆ.



**ಬಡತನ** ಆ ಊರಿಂದ ಈ ಊರಿಗೆ ಎಷ್ಟು ದೂರವೋ, ಈ ಊರಿಂದ ಆ ಊರಿಗೂ ಅಷ್ಟೆ ದೂರ-ಆದರೆ ಬಡತನದಿಂದ ಶ್ರೀಮಂತಿಕೆ ಬಹುದೂರ, ಶ್ರೀಮಂತಿಕೆಯಿಂದ ಬಡತನಕ್ಕೆ ಬಹು ಸಮೀಪ; ಬಡತನವು ಬಾಗಿಲಿಗೆ ಬರುತ್ತದೆ-ಪ್ರೇಯಸಿಯ ಕಿಟಕಿಯಿಂದ ಹೊರ ಜಾರುತ್ತಾಳೆ; ಬಡತನವನ್ನು ಪೂರ್ತಿಯಾಗಿ ನಿರ್ಮೂಲ ಮಾಡಲು ಒಂದೇ ಒಂದು ಉಪಾಯ-ಎಲ್ಲ ಬಡವರನ್ನೂ ಮೊದಲು ನಿರ್ಮೂಲ ಮಾಡಬೇಕು; ಹೆಂಡತಿ ಸತ್ತವನ ಬಡತನವೂ ಸತ್ತಂತೆಯೆ; ಸಾಕು ಎನ್ನುವುದನ್ನು ಕಲಿತವನ ಸನಿಯವೂ ಸುಳಿಯಲಾರದ ಪಿಶಾಚಿಯೇ ಬಡತನ; ಸಾಹಿತ್ಯವು ಶ್ರೀಮಂತರಿಗೆ ಕತೆಯನ್ನು ಕೊಡುತ್ತದೆ-ಬಡತನವು ಸಾಹಿತ್ಯಕ್ಕೆ ಕತೆಯನ್ನು ಕೊಡುತ್ತದೆ; ಬಡತನವು ಪಾಪವಲ್ಲ ಪಾಪದಕ್ಕಿಂತಲೂ ಹೆಚ್ಚು ಕೆಟ್ಟದು ಬಡತನ.

**ಬಡಮನುಷ್ಯ** ಬಡಗ (ಉತ್ತರ) ದಿಕ್ಕಿನಿಂದ ಬಂದ ಮನುಷ್ಯ.

**ಬಡವ** ಬಡವನಿಗೆ ಬಡತನದ ರೋಗ-ಶ್ರೀಮಂತನಿಗೆ ಶ್ರೀಮಂತಿಕೆಯ ರೋಗ; ಕೊಡುವ ದೇವನು ಬಡವನಲ್ಲ-ಆದಕಾರಣ ತನ್ನಂತಹ ಶ್ರೀಮಂತರಿಗೇ ಕೊಡುತ್ತಾನೆ; ಮುಗಿಲು ಬರೀ ರೂಪಾಯಿಗಳನ್ನೆ ಮಳಿಗರೆಯ ಬಹುದು ಹಿಡಿದಿಡಲು ಬಡವನಿಗೆ ಪೆಟ್ಟಿಗೆ ಎಲ್ಲಿ? ಬಡವನ ರೂಪಾಯಿಗೆ ನೂರು ನಯಾಪೈಸೆ ಸಿಗುವುದೂ ಕಷ್ಟ; ಬಡವನಿಗೆ ಅನ್ನ ಬಟ್ಟೆ ಕೊಡು-ಕೂಡಲೆ ಬಾಗಿಲು ಹಾಕು; ಗೆಳೆಯನಿದ್ದವನು ಬಡವನಲ್ಲ-ಅಳಿಯನಿದ್ದವನು ಶ್ರೀಮಂತನಲ್ಲ; ಕಾಳು ಕೊಂಚವೇ ಇದ್ದರೆ ಬಡವನಿಗೆ ಕೊಡು-ಹೆಚ್ಚಿದ್ದರೆ ಚೆಲ್ಲು; ಹಣ ಬೇಡುವ ಬಡವನಿಗೆ ದೇವನು ಮಕ್ಕಳು ಕೊಡುತ್ತಾನೆ-ಮಕ್ಕಳು ಬೇಡುವ ಶ್ರೀಮಂತನಿಗೆ ಹಣ ಕೊಡುತ್ತಾನೆ; ಬಡವನಿಗೆ ಸಾಕ್ಷಾತ್ ಲಕ್ಷ್ಮೀ ಪ್ರತ್ಯಕ್ಷವಾದರೂ ಹರಕು ಸೀರೆಯುಟ್ಟೇ ಬರುತ್ತಾಳೆ; ಬಡವನ ಹಸಿವು ಉಂಡರೂ ಹಿಂಗುವುದಿಲ್ಲ. ಬಡವ ಕೊಂಚ ಕೊಟ್ಟರೆ ಹೆಚ್ಚು ಬೇಡುವದಕ್ಕೆಂದೇ ಅರ್ಥ; ಬಡತನವನ್ನು ಎಲ್ಲರೂ ಬಾಯ್ತುಂಬ ಹೊಗಳು ತ್ತಾರೆ- ಹೊಟ್ಟೆ ತುಂಬಿದಾಗ! ಬಹು ಕಡು ಬಡವ ನಿರಬಹುದು ಜಗತ್ತಿನಲ್ಲಿ ಒಂದು ನಾಯಿಯನ್ನು ಸಾಕಲಾರದ ಬಡವನು ಮಾತ್ರ ಎಲ್ಲಿಯೂ ಇಲ್ಲ.

**ಬತ್ತಲು** ಕತ್ತಲಲ್ಲಿರುವವನಿಗೆ ಬತ್ತಲಿನ ಭಯವೇಕೆ?

**ಬದುಕು** ಸಾವಿನ ಮರ್ಮವನ್ನು ತಿಳಿಯಬೇಕೆನ್ನುವವರು ಸಾವಿರಾರು ಜನರು-ಬದುಕಿನ ಗುಟ್ಟನ್ನು ಅರಿಯಬೇಕೆಂಬುವವರು ಎಲ್ಲಿಯೋ, ಅಲ್ಲೊಬ್ಬರು

ಇಲ್ಲೊಬ್ಬರು ತಿಂಮನಂತೆ; ಬಹುಕಾಲ ಬದುಕಬಹುದು-ಆದರೆ ಅನೇಕ ಆಪ್ತೇಷ್ಟ ಗೆಳೆಯರನ್ನು ಕಳೆದುಕೊಳ್ಳಲು ಸಿದ್ಧನಿರಬೇಕು.

**ಬಯಸು** ಹೆಂಣು ಸುಂದರವಾಗಿದೆಯೆಂಬ ಮಾತ್ರಕ್ಕೆ ಬಯಸುವದಕ್ಕಾದೀತೆ ?- ಸರ್ಕಸಿನಲ್ಲಿಯ ಸಿಂಹವೂ ಸುಂದರವಾಗಿದೆ !

**ಬರ** ಬರಗಾಲದಲ್ಲಿ ಬದುಕುವುದೊಂದೇ ಕಷ್ಟವಲ್ಲ-ಸಾಯುವುದೂ ಕಷ್ಟ, ಕಂತಿನ ಮೇಲೆ ಸಾಯಬೇಕು.

**ಬರೆಹ** ಕೈಯ ಮಾತೃಭಾಷೆ.

**ಬಲ್ಬು** ಎಲೆಕ್ಟ್ರಿಕ್ ಬಲ್ಬುಗಳನ್ನು ಕಳವು ಮಾಡಿದರೆ ಅವು ಎಂದಿಗಾದರೂ ಬೆಳಕಿಗೆ ಬರಲೇಬೇಕಲ್ಲವೆ ?

**ಬಲೆ** ಮೂರ್ಖನಿಗೆ ಮುಖಸ್ತುತಿ, ಹೆಂಣಿಗೆ ಚಿನ್ನ, ಗಂಡಿಗೆ ಹೆಂಣು, ದೇಶಭಕ್ತನಿಗೆ ಅಧಿಕಾರ ಗ್ಯಾರಂಟಿ ಬಲೆಗಳು.

**ಬಸವ** ಬಾಲದ ಮುಂದೊಂದು ಬಸವ; ಗಾಡಿಯನ್ನೆಳೆಯುವದು ಬಸವನಲ್ಲ-ಬಸವ ತಿಂದ ಮೇವು.

**ಬಹಳ** ಬಹಳ ತಿನ್ನುವವನು ಬಹಳ ನಿದ್ರಿಸಬಲ್ಲ — ಬೇರಾವುದನ್ನೂ ಬಹಳ ಮಾಡಲಾರ.

**ಬ್ರಹ್ಮ** ಬ್ರಹ್ಮ ಹಣೆಯ ಬರೆಹವನ್ನಷ್ಟೆ ಬರೆಯುತ್ತಾನೆ — ಆದರೂ ಹಣೆಯ ಮೇಲಿರುವ ತಲೆಯನ್ನು ಮಾನವನ ಅಧಿಕಾರಕ್ಕೇ ಕೊಡುತ್ತಾನೆ.

**ಬ್ರಹ್ಮಗಂಟು** ಬ್ರಹ್ಮಗಂಟು ಹಾಕುತ್ತಾನೆ — ಯಮನು ಬಿಚ್ಚುತ್ತಾನೆ; ಜನಿವಾರದ ಗಂಟು ಬ್ರಹ್ಮಗಂಟು; ಸರಸ್ವತಿ ಗಂಟು ನೋಡಿರಿ.

**ಬ್ರಹ್ಮಚರ್ಯೆ** ಅನೈತಿಕವಾದ ಸ್ವಾರ್ಥಪೋಷಣೆ.

**ಬ್ರಹ್ಮಚಾರಿ** ಮದುವೆಯಾಗದವರೆಲ್ಲ ಬ್ರಹ್ಮಚಾರಿಗಳಲ್ಲ; ಮದುವೆಯ ಹುದಲಲ್ಲಿ ಸಿಕ್ಕುಬೀಳದೆ ಪ್ರಣಯದ ಹೊಳೆಯಲ್ಲಿ ಈಜುವವನೇ ಬ್ರಹ್ಮಚಾರಿ; ಹೂ ಬಿಡದ ಮಲ್ಲಿಗೆ ಬೋಳುಗಿಡ; ಮದುವೆಯಾದರವರೆಲ್ಲರೂ (ತನ್ನ ತಂದೆ ತಾಯಿಗಳ ಹೊರತು) ಮೂರ್ಖರು ಎಂದು ತಿಳಿದವ-ಬಹುಕಾಲ ಬ್ರಹ್ಮಚಾರಿಯಾಗಿದ್ದವನು ಒಳ್ಳೆಯ ಗಂಡನೂ ಆಗಲಾರ, ಕೆಟ್ಟ ಗಂಡನೂ ಆಗಲಾರ-ಎರಡರಲ್ಲಿ ಯಾವುದೊಂದು ಆದರೂ ಹೆಂಣಿನ ಪುಣ್ಯ; ಮದುವೆಯಾಗುವ ಮುನ್ನೆಯೇ ಹೆಂಡತಿಗೆ ಹೆದರುವ ಹೇಡಿ.

**ಬ್ರಹ್ಮಾದಿಗಳು** ಬ್ರಹ್ಮಾದಿಗಳಲ್ಲಿ ಎರಡು ಪಾರ್ಟಿಗಳಿವೆ-ಹರಿಹರ ಬ್ರಹ್ಮಾದಿಗಳು, ಮತ್ತು ದಾವಣಗೇರಿ ಬ್ರಹ್ಮಾದಿಗಳು.

**ಬಹುಮತ** ಮಂದಮತಿಗಳ ಬೆಂಬಲವಿದ್ದರೆ ಬಹುಮತ ವಿದ್ದಂತೆಯೆ.

**ಬಹುಮಾನ** ಪ್ರಕೃತಿಯು ಬಹುಮಾನವನ್ನೂ ಕೊಡುವುದಿಲ್ಲ, ಶಿಕ್ಷೆಯನ್ನೂ ವಿಧಿಸುವುದಿಲ್ಲ-ಅದು ಕೊಡುವುದು ಬರೀ ಪ್ರತಿಫಲವನ್ನಷ್ಟೆ.

**ಬಳಗ** ದೇವನು ದಯಪಾಲಿಸುವ ಮಾನವ ತಿಗಣೆಗಳು; ಪಕ್ಕದ ಮನೆಯಲ್ಲಿರುವ ಬಳಗದಕಿಂತಲೂ ಸಮುದ್ರದಾಚೆ ಇರುವ ಗೆಳೆಯನೇ ಮೇಲು.

**ಬಳ್ಳಾರಿ** ಬಳ್ಳಾರಿಯಲ್ಲಿ ಬಿಸಿಲೂ ಇದೆ, ಭಾಷಣಗಳೂ ಇವೆ, ಇನ್ನೂ ಜನ ಬದುಕಿದ್ದಾರೆ-ದೇವನ ದಯೆ ಅಪಾರವಾದುದು !

**ಬಾಡಿಗಾರ್ಡ್** ಕುಬುಸ.

**ಬಾನುಲಿ** ಸರಕಾರೀ ಶಂಖ.

**ಬಾಯಾರಿಕೆ** ಕುಡಿಯುವದೆ ಬಾಯಾರಿಕೆಗೆ ಕಾರಣ.

**ಬಾಯಿ** ಬಾಯಿ ಇದ್ದವನು ಬದುಕಿಯಾನು-ಭಾಷಣವನ್ನಾದರೂ ಮಾಡಿ? ಭಂಡಬಾಯಿ ಇದ್ದರೆ ಭಂಡಿಹೊನ್ನು ಇದ್ದಂತೆ; ಮುಚ್ಚದ ಬಾಯಿ ಹುಚ್ಚನ ಬಾಯಿ; ಹೆಂಗೆ ದೇವನು ಒಂದು ಬಾಯಿ, ಎರಡು ಕಿವಿಗಳನ್ನು ಕೊಡುವ ಬದಲು ಮೂರು ಬಾಯಿಗಳನ್ನೇ ಕೊಡಬೇಕಿತ್ತು-ಅದು ಹೇಳಬಯಸುವದನ್ನೆಲ್ಲ ಒಂದೇ ಬಾರಿಗೆ ಹೇಳಬಹುದಿತ್ತು.

**ಬಾರಿ** ಇಂಗ್ಲಿಷ್ 'ಬಾರ್' ಶಬ್ದದ ಸ್ತ್ರೀಲಿಂಗ-ಸ್ತ್ರೀಯರು ಹೆಚ್ಚು ಬರುವ 'ಬಾರ್'

**ಬಾಲ** ಪಾಪ! ಬಾಲವಿಲ್ಲದ ನಾಯಿ ತನಗಾದ ಸಂತೋಷವನ್ನೂ ತೋರಿಸಲಾರದು; ಬಾಲವಿದ್ದುದೆಲ್ಲವೂ ಬಸವನಲ್ಲ; ಬಾಲವೇ ನಾಯಿಯನ್ನು ಆಡಿಸಬಾರದು.

**ಬ್ರಾಹ್ಮಣ** ಬಾಳೆ ಎಲೆಯಲ್ಲಿ ಉಣಲು ಬಾರದವನು ಬ್ರಾಹ್ಮಣನೇ?

**ಬಾಳು** ಎರಡು ಸಾವುಗಳ ಮಧ್ಯೆ ಬರುವ ಇಂಟರವಲ್, ಬಾಳಿನ ಮನೆಗೆ ಎರಡೇ ಆಧಾರ ಸ್ತಂಭಗಳು-ಹಸಿವು ಮತ್ತು ಪ್ರೇಮ; ಕೂದಲು ಹುಟ್ಟಿ ಉದುರುವ ಒಳಗಾಗಿ ಬಾಳಿದುದೇ ಬಾಳು; ಬಾಳಿನ ಮೊದಲರ್ಧವು ಇನ್ನೊಂದರ್ಧಕ್ಕಾಗಿ ಕಾಯುತ್ತದೆ-ಇನ್ನೊಂದರ್ಧಕ್ಕಾಗಿ ಕಾಯುತ್ತದೆ-ಇನ್ನೊಂದರ್ಧವು

ಕಳೆದ ಅರ್ಥಕ್ಕಾಗಿ ಗೋಳಾಡುತ್ತದೆ; ಬಾಳು ಬಹು ದೊಡ್ಡ ಗುರು-ಆದರೆ ಅಬ್ಬ! ಅದೆಷ್ಟು ಗುರುದಕ್ಷಿಣೆ? ಬಾಳಿನಲ್ಲಿ ಮನುಷ್ಯನು ತಪ್ಪು ಮಾಡುವುದು ಎರಡೇ ಬಾರಿ-ಯೌವನದಲ್ಲಿ ಸುಳ್ಳನ್ನು ನಂಬುತ್ತಾನೆ, ವೃದ್ಧಾಪ್ಯದಲ್ಲಿ ಸತ್ಯವನ್ನು ಅನುಮಾನಿಸುತ್ತಾನೆ; ಬಾಳೆಂದು ಸೆರೆ ಕುಡಿದಂತೆ-ಸುಖವು ಕಡಿಮೆ ಯಾವಾಗಂತೆಲ್ಲ ತಲೆನೋವು ಹೆಚ್ಚಾಗುತ್ತದೆ; ಹೆಂಡತಿ ಇಲ್ಲದವನ ಬಾಳು ಕತ್ತೆಯ ಬಾಳು-ಇರುವವನ ಬಾಳು ನಾಯಿಯ ಬಾಳು; ಕೊಂಚ ಕಾಲವೇ ಬದುಕಿ ಬಹುಕಾಲ ಬಾಳಿದವರೂ ಇದ್ದಾರೆ.

**ಬ್ಯಾಂಕು** ಅಜೀರ್ಣವಾದ ಹಣಕ್ಕೆ ಔಷಧಿ ಕೊಡುವ ಆಸ್ಪತ್ರೆ; ಬೇಕಾದಷ್ಟು ಹಣವನ್ನು ಬೇಡವಾದಾಗ ಮಾತ್ರ ಬಾಡಿಗೆ ಕೊಡುವ ಸಾಹುಕಾರ.

**ಬ್ರಾಂದಿ** ಬ್ರಾಂದಿ ಕುಡಿದವರೆಲ್ಲ ಬ್ರಾಹ್ಮಣರಲ್ಲ, ವಿಸ್ಕಿ ಕುಡಿದವರೆಲ್ಲ ವೀರಶೈವರಲ್ಲ-ಇವೆರಡೂ ಇಲ್ಲವೆಂದ ಮಾತ್ರಕ್ಕೆ ಅವನು ಉತ್ತಮ ಬ್ರಾಹ್ಮಣನೂ ಅಲ್ಲ, ಉತ್ತಮ ವೀರಶೈವನೂ ಅಲ್ಲ.

**ಬಿಡುಗಡೆ** ಮೂರು ಸಾವಿರ ಕೊಟ್ಟು ಮದುವೆಯಾಗಿ ಮೂವತ್ತು ಸಾವಿರ ಕೊಟ್ಟು ಬಿಡುಗಡೆ ಪಡೆದರೂ, ಇನ್ನೂ ಲಾಭದಲ್ಲಿಯೆ ಇದ್ದಂತಾಯಿತಲ್ಲ?

**ಬಿಟ್ಟಿ** ಬಿಟ್ಟಿಗಿಟ್ಟಿಸುವವನು ಹಣವನ್ನು ಕೊಡಲು ದುಃಖಿಸುತ್ತಾನೆ-ಆದರೆ ಹಣದಕ್ಕಿಂತಲೂ ಹೆಚ್ಚು ಬೆಲೆಯದನ್ನು ಅರಿಯದೆ ಕೊಡುತ್ತಾನೆ.

**ಬಿಳೀ ಕೂದಲು** ಬಿಳೀ ಕೂದಲು ಬಂದರೆ ಬುದ್ಧಿ ಬಂದಂತಲ್ಲ-ಎಳೆ ಕತ್ತೆಗೆ ಮೈಯೆಲ್ಲವೂ ಬಿಳೀ ಕೂದಲೆ; ಬಿಳೀ ಕೂದಲನ್ನು ಗೌರವಿಸು ಎಂಬುದನ್ನು ಬೋಳು ತಲೆಯವನು ಮೊದಲು ಹೇಳಿದನಂತೆ.

**ಬೀಜ** ದೇವನ ತಲೆಗೆ ಹೂ ಹಾಕಿ ಆಶೀರ್ವದಿಸುತ್ತಾನೆ ಬ್ರಾಹ್ಮಣ, ಹೂ ಬೀಸಿ ಎಸೆದು ದೇವನ ಎದೆಗೆ ನೋವು ಮಾಡುತ್ತಾನೆ ಕ್ಷತ್ರಿಯ, ದೂರದಿಂದ ಕೈ ಮುಗಿದು ದೇವನ ಪಾದಕ್ಕೆ ಹೂ ಸಲ್ಲಿಸುತ್ತಾನೆ ಶೂದ್ರ, ದೇವನ ವರದ ಹಸ್ತದಲ್ಲಿ ಬೀಜಗಳನ್ನಿಕ್ಕಿ ನೀನೇ ಗಿಡವನ್ನು ಬೆಳೆಸಿಕೊಂಡು ನನಗೆ ಹೂ ಕೊಡು ಎನ್ನುತ್ತಾನೆ ವೈಶ್ಯ.

**ಬೀರಬಲ್ಲ** ಬೀರಿನ ರುಚಿ ಬಲ್ಲವನೇ ಬೀರಬಲ್ಲ.

**ಬೀರು** ನೀರಿನಿಂದ ಮೈ ತೊಳೆಯಬೇಕು-ಬೀರಿನಿಂದ ಮನಸ್ಸು ತೊಳೆಯಬೇಕು.

**ಬೀಳು** ಎಲ್ಲರೂ ಬೀಳುವವರೇ - ಕೆಲವರೇ ಏಳುವವರು.

**ಬುತ್ತಿ** ಕಟ್ಟಿಕೊಟ್ಟ ಬುತ್ತಿ, ಕಟ್ಟಿಗೊಂಡ ಮಡದಿ ಕಡೆಯವರೆಗೂ ಬರುವುದಿಲ್ಲ - ಬುತ್ತಿಯನ್ನು ತಿಂದು ಮಡದಿ ಮಾಯವಾಗುತ್ತಾಳೆ.

**ಬುದ್ಧಿ** ಬಡವನ ಏಕಮಾತ್ರ ಸಂಪತ್ತು; ಸಾಹಿತಿಯಂತೆ ಬುದ್ಧಿಯನ್ನುಗಳಿಸು - ರಾಜಕಾರಣಿಯಂತೆ ಉಪಯೋಗಿಸಬೇಡ; ವಿದ್ಯೆ ಇಲ್ಲದವನ ಬುದ್ಧಿ ಬುದ್ಧಿ ಇಲ್ಲದವನ ವಿದ್ಯೆಕಿಂತಲೂ ಸಾವಿರ ಪಾಲು ಮೇಲು; ಶತ್ರುವಿನಿಂದಲೂ ಬುದ್ಧಿ ಕಲಿ-ಮಿತ್ರನಿಗೂ ಬುದ್ಧಿ ಹೇಳಲು ಹೋಗಬೇಡ; ಜ್ಞಾಪಕ ಶಕ್ತಿ ಸಾಲದು, ಹಣವಿಲ್ಲ ಎಂದು ಮುಂತಾಗಿ ಅಳುವವರು ಎಲ್ಲೆಲ್ಲಿಯೂ ಕಾಣುತ್ತಾರೆ-ಬುದ್ಧಿ ಕಡಿಮೆ ಎಂದು ಒಪ್ಪಿಕೊಂಡವನು ಒಬ್ಬನೂ ಇಲ್ಲ.

**ಬುದ್ಧಿಮಾತು** ಬುದ್ಧಿ ಬಾರದವನಿಗೆ ಬುದ್ಧಿ ಇಲ್ಲದವನು ಹೇಳುವ ಮಾತು ಬುದ್ಧಿ ಮಾತು; ಬುದ್ಧಿ ಮಾತು

ಹೇಳದವನೇ ಇಲ್ಲ-ಕೇಳಿದವನೂ ಇಲ್ಲ; ಯುದ್ಧಕ್ಕೆ ಹೋಗೆಂದಾಗಲಿ. ಮದುವೆಯಾಗೆಂದಾಗಲಿ ಯಾರಿಗೂ ಬುದ್ಧಿ ಮಾತು ಹೇಳಬೇಡ; ಅವರಿವರಿಗೆ ಬುದ್ಧಿ ಮಾತು ಮಣಗಟ್ಟಲೆ ಕೊಡುವ ಬದಲು, ತಾನೇ ತೊಲೆಗಟ್ಟಲೆ ಸೇವಿಸುವುದು ಎಲ್ಲರಿಗೂ ಹಿತ.

**ಬೂಟು** ಬೂಟು ಇಲ್ಲವೆಂದು ಅಳುವವನು ಕಾಲೇ ಇಲ್ಲದವನನ್ನು ಕಾಣಬೇಕು.

**ಬೆಕ್ಕು** ನಾಯಿ ಪುಣ್ಯ ಮಾಡಿದರೆ ಬೆಕ್ಕಾಗಿ ಹುಟ್ಟುತ್ತದೆ; ಆಕಳಿಸುವುದಕ್ಕಾಗಿಯೆ ಅವತರಿಸಿದ ಸೋಮಾರಿ; ಒಂದು ಬೆಕ್ಕು, ಒಂದು ಹೆಣ್ಣು ಮನೆಯಲ್ಲಿರಬೇಕು-ಇನ್ನೊಂದು ಬೆಕ್ಕಾಗಲಿ, ಹೆಣ್ಣಾಗಲಿ ಇತ್ತ ಸುಳಿಯಲಾರದು.



**ಬೆತ್ತ** ಪ್ರತಿಯೊಬ್ಬ ಮೂರ್ಖನ ಕೈಗೂ ಒಂದೊಂದು ಬೆತ್ತವನ್ನು ಕೊಟ್ಟರೆ ಎಲ್ಲ ಕಾಡುಗಳು ಖಾಲಿಯಾಗುತ್ತವೆ.

**ಬೆದರುಗೊಂಬೆ** ಗಂಡನೆಂಬ ಪ್ರಾಣಿ ಅದೆಷ್ಟೇ ನಿರುಪಯೋಗಿಯಾಗಲಿ, ಬೆದರುಗೊಂಬೆಯ ಕೆಲಸವನ್ನಾದರೂ ಮಾಡುತ್ತಿದ್ದರೆ ಎಷ್ಟೋ ಮೇಲು.

**ಬೆರಳು** ಉಂಗುರ ಕಳೆದುಕೊಂಡವನು ಬೆರಳು ಕಳೆದುಕೊಂಡವನ ಮುಂದೆ ಅಳುವುದು ನಾಚಿಕೆಗೇಡು.

**ಬೆಲೆ** ತಾಯಿಯ ಬೆಲೆ, ನಾಯಿಯ ಬೆಲೆ ಎಷ್ಟೆಂಬುದನ್ನು ಯಾರು ಹೇಳಬೇಕು ? ಒಬ್ಬನ ಬೆಲೆ ಕಟ್ಟಲು ಅವನು ಏನು ನುಡಿಯುತ್ತಾನೆಂಬುದು ಮುಖ್ಯಲ್ಲ-ಅವನು ಏನು ಮಾಡುತ್ತಾನೆಂಬುದು ಅಲ್ಲ-ಅವನು ಏನು ಆಗುತ್ತಾನೆಂಬುದೇ ಮುಖ್ಯ; ಚಿನ್ನ ಬೆಲೆ ಕಟ್ಟಿಸಿಗೊಳ್ಳುತ್ತದೆ-ಕಲ್ಲು ಬೆಲೆ ಕಟ್ಟುತ್ತದೆ; ಬೆಲೆ ಬಲ್ಲವರು ಇಲ್ಲ-ಖರೀದು ತಿಳಿಯದವರು ಇಲ್ಲ; ನಿನ್ನ ಹಿಂದೆ ಅವರಿವರು ನಿನ್ನ ಬಗ್ಗೆ ಏನು ಆಡಿಕೊಳ್ಳುತ್ತಾರೋ, ಅದೇ ನಿನ್ನ ನಿಜವಾದ ಬೆಲೆ; ಅವನ ಮಾತಿಗೆ ಬೆಲೆ ಇದೆ ಎಂದರೆ, ಅವನ ಬಾಯಲ್ಲಿ ಒಂದಾದರೂ ಚಿನ್ನದ ಹಲ್ಲು ಇರಲೇಬೇಕು.

**ಬೆಳ್ಳುಳ್ಳಿ** ನಿತ್ಯವೂ ಒಂದು ಹಣ್ಣು ತಿಂದರೆ ಡಾಕ್ಟರ್ ದೂರವಾಗುತ್ತಾನೆ-ಬೆಳ್ಳುಳ್ಳಿ ತಿಂದರೆ ಹೆಂಡತಿಯು ದೂರವಾಗುತ್ತಾಳೆ.

**ಬೇಕು** ಒಳ್ಳೆಯ ಬಾಳು ಬಾಳಲು ಬರೀ ಬೇಕುಗಳನ್ನೊಂದೆ ಕಡಿಮೆ ಮಾಡಿಕೊಂಡರೆ ಸಾಲದು-ಬೇಡಗಳನ್ನೂ ಕಡಿಮೆ ಮಾಡಿಕೊಳ್ಳಬೇಕು, ಬೇಕು ಬೇಡಗಳು

ಎಷ್ಟೆಷ್ಟು ಕಡಿಮೆಯಾಗುತ್ತವೋ ಮಾನವನು ಅಷ್ಟಷ್ಟು ದೇವನಾಗುತ್ತಾನೆ.

**ಬೇಡು** ಮಾನವನು ಬೇಡಿದುದನ್ನೆಲ್ಲ ದೇವನು ಕೊಟ್ಟಿದ್ದರೆ ಮಾನವನಿಗೆ ಉಪಕಾರದಕಿಂತಲೂ ಅಪಕಾರವೇ ಹೆಚ್ಚು ಆಗುತ್ತಿತ್ತು-ಸಾವು ಸನಿಯ ಬಂದಾಗ ಒಲ್ಲೆ ಎನ್ನುತ್ತಾನೆ, ಸುಖವಾಗಿದ್ದಾಗ ಹೆಂಣು ಬೇಡುತ್ತಾನೆ ಈ ಮೂರ್ಖ !

**ಬೇಲಿ** ಬೇಲಿ ಭದ್ರವಾಗಿದ್ದರೆ ಪಶುಗಳಿಗೂ ಪ್ರಾಮಾಣಿಕತೆ ಬರುತ್ತದೆ; ಹೆಂಣಿನ ಸುತ್ತಲೂ ಗಂಡು ಹಾಕಿರುವ ಮುಳ್ಳುಬೇಲಿಗೆ ದಡ್ಡರು ಪಾತಿವ್ರತ್ಯ ಎನ್ನುತ್ತಾರೆ ಪಕ್ಕದ ಮನೆಯುವರನ್ನು ಪ್ರೀತಿಸು-ಆದರೆ ಮಧ್ಯೆ ಇರುವ ಬೇಲಿಯನ್ನು ಇನ್ನೂ ಭದ್ರಮಾಡು.

**ಬೇಸರ** [illegible]ವಿಲ್ಲದ ಬೋಳು ಕತ್ತು.

**ಬೇಸಿಗೆ** ಬಳ್ಳಾರಿಯಲ್ಲಿ ಬೇಸಿಗೆ ಮಾರ್ಚ 31ಕ್ಕೆ ಮುಗಿದು ಏಪ್ರಿಲ 1ಕ್ಕೆ ಆರಂಭವಾಗುತ್ತದೆ-ಒಂದೊಂದು ಬಾರಿ [illegible] ತಿರುವು ಮುರುವು ಆದುದೂ ಉಂಟು.

**ಬೈ** [illegible]ಯು ಅಸ್ತ್ರ; ಬೈಯುವದಕ್ಕಾಗಿಯೆ ತನಗೊಂದು [illegible] ಇದೆ ಎಂದು ತಿಳಿದವನು ತನಗೆ ಎರಡು ಕಿವಿಗಳೂ ಇರೆ ಎಂಬುದನ್ನು ಮರೆತಿರುತ್ತಾನೆ. ಇದೊಂದು ಖೋಟಾನಾಣ್ಯ-ಇತರರಿಗೆ ಸುಲಭವಾಗಿ ಕೊಡಬಹುದು, ಆದರೆ ಅಷ್ಟೇ ಬೇಗ ಮರಳಿ ಬರುತ್ತದೆ; ತೆಗೆದುಕೊಂಡರೆ ಮಾತ್ರವೆ ಇದು ನಿ[illegible] ತಿರುಗಿಸಹ ನೋಡದೆ ಅದನ್ನು ಬಿಟ್ಟು ಬಿಡು. ಅದು [illegible]ದವನದೇ !

**ಬೈತಲೆ** ಬರೀ ಬೈಗಳನ್ನೇ ತುಂಬಿಕೊಂಡಿರುವ ತಲೆ - ಉದಾ: ಮಾಸ್ತರರ ತಲೆ, ಮಡದಿಯ ತಲೆ.

**ಬೈವೀಕ್ಲಿ** ಬೈಯಲು ವಾರಕ್ಕೆರಡುಬಾರಿ ಬರುವ ಪತ್ರಿಕೆ.

**ಬಂಧು** ಬಂದು ಹೋಗುವವರೇ ಬಂಧುಗಳು-ವಾರಕ್ಕೊಮ್ಮೆ ಯಾದರೂ ಬರುತ್ತಿರಬೇಕು, ವಾರಕ್ಕೆರಡೇ ಬಾರಿ ಹೋಗುತ್ತಿರಬೇಕು; ಮನೆಗೆ ಬೆಂಕಿಬಿದ್ದರೆ ಮೊದಲು ಇಲಿಗಳು ಓಡುತ್ತವೆ-ನಿನಗೆ ಬಡತನ ಬಂದರೆ ಮೊದಲು ಬಂಧುಗಳು ಓಡುತ್ತಾರೆ; ನಿನಗಿಂತಲೂ ನಿನ್ನ ಸಮೀಪದ ಬಂಧು ನಿನಗಿನ್ನಾರಯ್ಯಾ ?

**ಬೆಂಣೆ** ಕಲ್ಲಾದರೇನಂತೆ, ಬೆಂಣೆಯಲ್ಲಿ ಬೇಯಿಸಿದರೆ ಬ್ರಾಹ್ಮಣ ತಪ್ಪದೆ ತಿನ್ನುತ್ತಾನೆ.

**ಬೊಂಬೆ** ಎಲ್ಲ ವಯಸ್ಸಿಗೂ ಬೊಂಬೆಗಳು ಬೇಕು-ಬಾಲ್ಯದಲ್ಲಿ ಮಣ್ಣಿನ ಬೊಂಬೆ, ಪ್ರಾಯದಲ್ಲಿ ಹೆಂಣೇ ಬೊಂಬೆ, ನಂತರ ಮಕ್ಕಳೇ ಬೊಂಬೆ, ವೃದ್ಧಾಪ್ಯದಲ್ಲಿ ದೇವರ ಬೊಂಬೆ.



**ಭಜನೆ** ಭೋಜನವು ಸಿದ್ಧವಾಗುವವರೆಗೂ ಭಕ್ತರಿಗೆ ಭಜನೆಯೇ ಗತಿ.

**ಭಯ** ಭಯದಿಂದ ಸೃಷ್ಟಿಯಾಗುವಷ್ಟು ಸುಳ್ಳುಗಳನ್ನು ದೇವನೂ ಎಣಿಸಲಾರ.

**ಭರತ** ಅಡವಿಗೆ, ಹೋಗಿದ್ದ ಅಂಣನ ಬೆನ್ನು ಹತ್ತಿ ಬೂಟು ಕಸಿದು ತಂದವನು.

**ಭವಿಷ್ಯ** ಕೆಲಸವನ್ನು ಮಾಡಲಾರದವನು ಭವಿಷ್ಯವನ್ನು ಕಾಯುತ್ತ ಕೂಡುತ್ತಾನೆ; ಭವಿಷ್ಯವನ್ನು ತಿಳಿಯಬೇಡ-ನಿನ್ನ ಸಾವಿಗಾಗಿ ನೀನೇ ಅಳಬೇಡ.

**ಭಸ್ಮಾಸುರ** ಸಿಗರೇಟಿನ ಬೂದಿ ಹಾಕುವ ಆಷ್ ಟ್ರೆ.

**ಭಾಗ್ಯ** ಸಹಾನುಭೂತಿಯುಳ್ಳ ಹೆಂಡತಿಯಕಿಂತಲೂ ದೊಡ್ಡ ಭಾಗ್ಯವಾವುದುದು ?

**ಭ್ರಾತೃ** ಕಾವ್ಯದಲ್ಲಿ ಕಾಣುವುದು ಕೃತಕ ಭ್ರಾತೃಪ್ರೇಮ-ಬಾಳಿನಲ್ಲಿ ದೊರೆವುದು ಸಹಜ ಭ್ರಾತೃದ್ವೇಷ.

**ಭಾರ್ಯ** ಬಾಳಿನಲ್ಲಿ ಭಾರವಾಗುವವಳೇ ಭಾರ್ಯ; ನಪುತ್ರಸ್ಯ ಗತಿರ್ನಾಸ್ತಿ-ನಭಾರ್ಯಸ್ಯ ಜತಿರ್ನಾಸ್ತಿ.

**ಭಾವಕವಿತೆ** ಮಸಿಯಲ್ಲಿ ಹೆಚ್ಚು ನೀರು ಬೆರೆಸಿ ಕವಿತೆ ಬರೆದರೆ ಅದೇ ಭಾವಕವಿತೆ.

**ಭಾವಗರ್ಭಿತ** ಅಕ್ಕನ ಗಂಡನಿಗೆ ಬಸಿರಾದವಳು.

**ಭಾವಜೀವಿ** ಅಕ್ಕನ ಗಂಡನಾದ ಭಾವನ ಆಶ್ರಯದಲ್ಲಿ ಜೀವಿಸುವ ವ್ಯಕ್ತಿ.

**ಭಾಷಣ** ಬಾಯಿಯ ರೋಗ; ರಾಜಕಾರಣಿಯ ಭಾಷಣಕ್ಕೆ ಬುದ್ಧಿ, ಸಾಹಿತಿಯ ಭಾಷಣಕ್ಕೆ ಸುತ್ತಳತೆ, ತತ್ವಜ್ಞಾನಿಯ ಭಾಷಣಕ್ಕೆ ವಿಷಯ, ಇಷ್ಟೇ ಇರಬೇಕೆಂಬ ಕಟ್ಟು ಇಲ್ಲ; ಐದೇ ನಿಮಿಷಗಳ ಭಾಷಣಕ್ಕೆ ತಿಂಗಳ ತಯಾರಿ ಬೇಕು, ಒಂದು ಗಂಟೆಯ ಭಾಷಣಕ್ಕೆ ವಾರದ ತಯಾರಿಬೇಕು, ಗಂಟೆಗಟ್ಟಲೆ ಭಾಷಣಕ್ಕೆ ಬಾಯಿಯೊಂದು ಇದ್ದರೆ ಸಾಕು; ಅನೇಕರ ಭಾಷಣಗಳಲ್ಲಿ ಸತ್ಯಾಂಶವೂ ಇರುತ್ತದೆ, ನಾವೀನ್ಯತೆಯೂ ಇರುತ್ತದೆ-ಆದರೆ ಸತ್ಯಾಂಶವಿದ್ದಲ್ಲಿ ನಾವೀನ್ಯತೆ ಇಲ್ಲ, ನಾವೀನ್ಯತೆ

ಇರುವಲ್ಲಿ ಸತ್ಯಾಂಶವಿಲ್ಲ; ಭಾಷಣವು ರಬ್ಬರಿನಿಂದ ತಯಾರಾದದ್ದು-ವಿಷಯವಿರುವುದು ಅಷ್ಟೆ, ಎಳೆದರೆ ಉದ್ದವಾಗುತ್ತದೆ, ಕೈ ಬಿಟ್ಟರೆ ಚಿಕ್ಕದಾಗುತ್ತದೆ; ಎಲ್ಲರ ಮೌನವೂ ಹೇಗೆ ಒಂದೇ ರೀತಿಯದೋ ಅನೇಕರ ಭಾಷಣಗಳೂ ಹಾಗೆಯೆ ಒಂದೇ ರೀತಿಯವು; ಭಾಷಣಗಳಿಂದ ಯಾರ ಹೊಟ್ಟೆಯೂ ತುಂಬಿಲ್ಲ-ಹೂ ಮಾಲೆ ಮಾರುವವನೊಬ್ಬನ ಹೊರತು.

**ಭಾಷಣಕಾರ** ತಡವಾಗಿ ಆರಂಭಿಸಿ, ಬಹು ಹೊತ್ತು ಮಾತನಾಡಿ, ಬೇಗ ಮುಗಿಸುವವನೇ ಉತ್ತಮ ಬಾಷಣಕಾರ; ಏನು ಹೇಳುತ್ತಾನೆಂಬುದನ್ನು ಮೊದಲು ಹೇಳಿ, ಹೇಳುವುದನ್ನೆಲ್ಲ ನಂತರ ಹೇಳಿ, ಏನೇನು ಹೇಳಿದನೆಂಬುದನ್ನು ಕೊನೆಗೆ ಹೇಳಿ, ಏನೂ ತಿಳಿಯದಂತೆ ಮಾಡುವವನೆ ಜಾಣ ಬಾಷಣಕಾರ; ಕೆಲವು ಭಾಷಣಕಾರರು ತಮಗೆ ತಿಳಿದ ವಿಷಯದ ಮೇಲೆ ಕೂಡ ಮಾತನಾಡುತ್ತಾರೆ; ತನಗಿಲ್ಲದುದರ ಮೇಲೆ ಮಾತನಾಡುವವನು - ಉದಾ:- ರೋಗಿಯ ಭಾಷಣ, ಆರೋಗ್ಯದ ಮೇಲೆ, ಅನೇಕರ ಭಾಷಣ ಯೋಗ್ಯತೆ 'ಯ' ಮೇಲೆ



**ಭಾಷೆ** ತಲೆಯಲ್ಲಿರುವ ವಿಚಾರವನ್ನು ನಾಲಗೆಯ ಜಾಣತನವು ಮುಚ್ಚಿಡುವ ಹೊದಿಕೆ.

**ಭಾಷಾಂತರ** ಅಪಶ್ರುತಿಯಲ್ಲಿ ಹೊರಟ ಪ್ರತಿಧ್ವನಿ; ತನ್ನ ಗ್ರಂಥವನ್ನು ತಾನೇ ಭಾಷಾಂತರ ಮಾಡುವ ಸಾಹಿತಿಯ ಮೇಲೆ ಆತ್ಮಹತ್ಯದ ಖಟ್ಲೆ ಆಗುವುದಿಲ್ಲರೆ? ಭಾಷಾಂತರವು ಹೆಂಣನಂತೆ-ಸುಂದರವಾಗಿರುತ್ತದೆ, ಇಲ್ಲವೆ ಸರಿಯಾಗಿರುತ್ತದೆ; ಮೂಲವನ್ನು ತಿಳಿಯಲಾರದವನು ಬಾಷಾಂತರವನ್ನೇನು ತಿಳಿದಾನು ?

**ಭಿಕ್ಷುಕ** ದುಡಿಯದೆ ತಿನ್ನುವ ಪ್ರತಿಯೊಬ್ಬ ಶ್ರೀಮಂತನೂ ಭಿಕ್ಷುಕನೇ! ಬರ ಎಂದರೇನು ಅನ್ನುತ್ತಾನೆ ಭಿಕ್ಷುಕ; ಭಿಕ್ಷುಕ ದಾರಿ ತಪ್ಪಿದುದೇ ಇಲ್ಲ-ಅವನು ನಡೆದುದೆ ದಾರಿ.

**ಭಿಕ್ಷೆ** ದೇವರಿಗೆಂದು ಭಿಕ್ಷೆ ಬೇಡುವವನು ಒಂದೇ ಬಾರಿಗೆ ಇಬ್ಬರಿಗಾಗಿ ಬೇಡುತ್ತಾನೆ; ಅಂಜಂಜುತ್ತ ಭಿಕ್ಷೆ ಬೇಡುವವನು ಇಲ್ಲ ಎನಿಸಿಗೊಳ್ಳುವುದೇ ನಿಜ; ಅನವಶ್ಯಕವಾಗಿ ಭಿಕ್ಷೆ ಬೇಡುವವನು, ಅವಶ್ಯಕತೆ ಇದ್ದಾಗ ಕಳವು ಮಾಡದೆ ಬಿಟ್ಟಾನೆ ?

**ಭೀಮ ಪ್ರಚೋದನೆ** ಹಸಿವನ್ನು ಕೆಣಕುವುದು-ಉದಾ : ಬ್ರಾಂದಿ ವಿಸ್ಕಿ, ಇತ್ಯಾದಿ.

**ಭೂತ** ಭೂತವಿಲ್ಲವೆಂದು ಅವರಿವರಿಗೆ ಹೇಳುವವನು ತನ್ನ ಮನದಲ್ಲಿ ಭೂತಕ್ಕೆ ಹೆಚ್ಚು ಅಂಜುತ್ತಾನೆ.

**ಭೂಮಿ** ಹೊರಗಡೆ ನಿಲ್ಲಲು ಕೊಂಚ ಸ್ಥಳವು ಸಿಕ್ಕಿದ್ದರೆ ಎಂತಹ ಹೇಡಿಯಾದರೂ ಭೂಮಿಯನ್ನು ಕದಲಿಸುತ್ತಿದ್ದ.

**ಭೈರಗಿ** ಅನುಗಾಲವೂ ಅಲ್ಲದಿದ್ದರೂ ಈ ಎರಡು ಸಮಯಗಳಲ್ಲಿ ಮಾತ್ರ ತಪ್ಪದೆ ಮಾತನಾಡುವವನು-ತಾನು

ಸುಮ್ಮನಿರಬೇಕಾದಾಗ, ಮತ್ತು ಇತರರು ಮಾತನಾಡಬೇಕಾದಾಗ.

**ಭಂಡ** ಭಂಡನ ಬಾಯಿ ಮೋಚಿಯ ಕತ್ತಿ ಇದ್ದಂತೆ-ಹೊಲಸು ತೊಗಲನ್ನಷ್ಟೆ ಕತ್ತರಿಸುತ್ತದೆ.



**ಮಕ್ಕಳ ವಿದ್ಯಾಭ್ಯಾಸ** ಜಗತ್ತು ಮುಳುಗುವಾಗ ಉಳಿಸಬಲ್ಲವನೊಬ್ಬನಿದ್ದರೆ ಅವನೊಬ್ಬನಿಗೇ ಮಕ್ಕಳ ವಿದ್ಯಭ್ಯಾಸದ ಹೊಣೆಯನ್ನು ಹೊರಿಸು.

**ಮಕ್ಕಳು** ಮಕ್ಕಳೊಡನೆ ಆಡಬಲ್ಲವನು ಮುಂದಿನ ಜನ್ಮದಲ್ಲಿಯಾದರೂ ಮಹಾತ್ಮನಾಗಬಲ್ಲ; ಮಕ್ಕಳಿದ್ದವರನ್ನು ದೇವನು ಕಾಪಾಡುತ್ತಾನೆ-ಮಕ್ಕಳಿಲ್ಲದವರು ಪೂಜಾರಿಯನ್ನು ಕಾಪಾಡುತ್ತಾರೆ; ಒಬ್ಬ ತಂದೆಯ ಹೃದಯದಲ್ಲಿ ಹತ್ತು ಮಕ್ಕಳಿಗೆ ಎಡೆ ಇದೆ-ಹತ್ತು ಮಕ್ಕಳ ಇಪ್ಪತ್ತು ಬಂಗಲೆಗಳಲ್ಲಿ ಒಬ್ಬ ತಂದೆಗೆ ಎಡೆ ಇಲ್ಲ; ಮದುವೆಯೆಂಬ ಅಪಘಾತಕ್ಕೀಡಾದವನಿಗೆ ಮಕ್ಕಳೆಂಬ ಗಾಯಗಳು ಆಗುವುದು ಸಹಜ; ಅವರವರ ಮಕ್ಕಳು ಅವರಿಗೇ ಚೆಂದ-ಇತರರ ಹೆಂಡಂದಿರೂ ಚೆಂದ: ಚಿಕ್ಕಮಕ್ಕಳು ಕುಡಿದವರಿಗೆ ಸಮಾನ-ಸುಳ್ಳನ್ನಾಡಲರಿಯವು; ತಿಂಡಿಗಾಗಿ ಅಳುವ ಮಕ್ಕಳನ್ನು ತಂದೆ ತಾಯಿಗಳು ಬೈಯುತ್ತಾರೆ-ಚಿನ್ನಕ್ಕಾಗಿ ಅಳುವ ತಂದೆ ತಾಯಿಗಳನ್ನು ? ನಿನ್ನ ಮಕ್ಕಳು ನಿನ್ನ ಮಕ್ಕಳಲ್ಲ-ಅವು ನಿನ್ನಿಂದ ಬರಲಿಲ್ಲ, ನಿನ್ನ ದ್ವಾರ ಬಂದಿವೆ, ಅಷ್ಟೆ;

ಮಕ್ಕಳನ್ನು ಅರ್ಥ ಮಾಡಿಕೊಳ್ಳುವುದು ಎಲ್ಲರಿಗೂ ಸಾಧ್ಯ-ಹೆತ್ತವರ ಹೊರತು ? ಮಕ್ಕಳು ಕಲಿಯುವುದು ನಾವು ಕಲಿ ಎಂಬುದನ್ನಲ್ಲ, ನಾವು ಅರಿತು ಮಾಡುವದನ್ನೂ ಅಲ್ಲ-ನಾವು ಅರಿಯದೆ ಮಾಡುತ್ತಿರುವುದನ್ನು ಅವು ಅರಿತು ಕಲಿಯುತ್ತವೆ.

**ಮಗ** ಮಗಳು ಕಾಲರಾ ಆದರೆ ಮಗನು ಪ್ಲೇಗು; ತಂದೆಯ ನಡತೆಯ ಏಕಮಾತ್ರ ಅಧಿಕೃತ ವಿಮರ್ಶಕ; ಮದುವೆಯಾಗುವವರೆಗೂ ಮಗನು ಮಗ-ಸಾಯು ವವರೆಗೂ ಮಗಳು ಮಗಳೇ ! ಮಗನು ಅವಿವೇಕಿ ಯಾದರೆ ಮನೆಯಿಂದ ಹೊರತಳ್ಳು-ಅವನೇನು ಸಾಕಿದ ನಾಯಿಯೇ ? ಮಗನು ಜಾಣನಾದರೆ ತಂದೆಗೆ ಸಂತೋಷ-ದಡ್ಡನಾದರೆ ತಾಯಿಗೆ ದುಃಖ; ಮಗನಿಗೆ ಮನೆ ಕೊಡದವನು ಅಳಿಯನಿಗೆ ಸುಮ್ಮನೆ ಕೊಟ್ಟನಂತೆ; ಒಂದೇ ಕತ್ತೆ ಇರುವ ಅಗಸ ಅದನ್ನು ಕುದುರೆಯಂತೆ ಕಾಣುತ್ತಾನೆ-ಒಬ್ಬನೇ ಮಗನಿರುವ ತಂದೆ ಅವನನ್ನು ಕತ್ತೆಯನ್ನಾಗಿ ಮಾಡುತ್ತಾನೆ.

**ಮಗಳು** ಮಡದಿ, ಮಗಳು, ಮರಣ ಎಂಬೀ ಮೂರು 'ಮ' ಗಳು ಅತ್ಯವಶ್ಯಕವಾದ ಕೆಡುಕುಗಳು ; ಮದುವೆಗಾದ ಮಗಳು ಕಳ್ಳಮಾಲು ಇದ್ದಂತೆ-ಎಷ್ಟು ಬೇಗ ಹೊರ ಸಾಗಿದರೆ ಅಷ್ಟು ಒಳಿತು; ಮದುವೆ ಮಾಡಿ ಕೊಟ್ಟ ಮೇಲೆ ಮಗಳೂ ಬೇರೆಮನೆಯವಳೇ; ಪ್ರಾಯದ ಮಗಳನ್ನು, ಸತ್ತ ಮೀನನ್ನು ಮನೆಯಲ್ಲಿಟ್ಟು ಕೊಳ್ಳುವವನು ಶತ ಮೂರ್ಖ; 'ಅ' ಮತ್ತು 'ಬ' ಇಬ್ಬರೂ 'ಕ' ನ ಮಕ್ಕಳು, ಆದರೆ 'ಬ' ಮಾತ್ರ 'ಕ' ಮಗನಲ್ಲ-ಮಗಳು ? ಮಾಡಬೇಡ ಎಂದು ಮಗಳಿಗೆ ಹೇಳುವ ನೂರೆಂಟು ಕೆಟ್ಟುವನ್ನು ತಾಯಿ ಎಲ್ಲಿಂದ

ಕಲಿತಳೋ ? ನಿನ್ನ ಮಗಳನ್ನು ಶ್ರೀಮಂತನಲ್ಲದ ಮನುಷ್ಯನಿಗೆ ಕೊಡಬೇಕೋ, ಮನುಷ್ಯನಲ್ಲದ ಶ್ರೀಮಂತನಿಗೆ ಕೊಡಬೇಕೋ ಎಂಬುದನ್ನು ನೀನೇ ನಿರ್ಧರಿಸು.

**ಮಗು** ಮಾನವನನ್ನು ಆಶ್ರಯಿಸಿ ಬಂದ ದೇವರು; ಮಗು ಸುಮ್ಮನಿದೆ ಎಂದರೆ ಏನೋ ತಂಟೆಮಾಡಿದೆ ಎಂದೇ ಅರ್ಥ; ಮಗುವಿಗೆ ಗುಟ್ಟು ಹೇಳಿದರೆ ಪ್ರಮಾದವಿಲ್ಲ-ಅದು ಗುಟ್ಟು ಎಂಬುದನ್ನು ಮಾತ್ರ ಅದಕ್ಕೆ ಹೇಳಬೇಡ; ನಾನು ಈ ಜನ್ಮವೆಲ್ಲವೂ ಮಗುವಾಗಿಯೇ ಇರಬೇಕಿತ್ತು ಎಂದು ಬಯಸುವವರು ಇದ್ದಾರೆ-ಅವರ ಕಿವಿ ಎಂದೂ ಮಾಸ್ತರರ ಕೈಯಲ್ಲಿ ದೊರೆತಂತಿಲ್ಲ.

**ಮಜಾ** ಚಿಕ್ಕ ವರನಿಗೆ ಪುಟ್ಟ ಕನ್ನೆಯನ್ನು ಮದುವೆ ಮಾಡಿದರೆ ತಂದೆ ತಾಯಿಗಳಿಗೆ ಮಜಾ, ಪ್ರಾಯದ ವರನಿಗೆ ಪ್ರಾಯದ ಕನ್ನೆಯನ್ನು ಮದುವೆ ಮಾಡಿದರೆ ಮದವೆಯಾದವರಿಗೆ ಮಜಾ, ವೃದ್ಧವರನಿಗೆ ಪ್ರಾಯದ ಕನ್ನೆಯನ್ನು ಮದುವೆ ಮಾಡಿದರೆ ಮತ್ತಾರಿಗೋ ಮಜಾ !

**ಮಡದಿ** ಪ್ರಾರಂಭಕ್ಕೆ ಇವಳಿಂದ ಪಾಣಿಗ್ರಹಣ, ನಂತರ ಪ್ರಾಣಿಗ್ರಹಣ, ಕೊನೆಗೆ ಪ್ರಾಣಗ್ರಹಣ; ಮಡದಿಗೆ ಬುದ್ಧಿ ಹೇಳುವ ಬದಲು ಗೋಡೆಗೆ ಹೇಳು-ಅದು ಸುಮ್ಮನಾದರೂ ಇರುತ್ತದೆ. ಒಬ್ಬರಕಿಂತಲೂ ಇಬ್ಬರು ಲೇಸು-ಮಡದಿಯರು ?

**ಮಡಿವಂತ** ಮಡಿಯುವಂತಹನೇ ಮಡಿವಂತ: ಸೆರೆ ಕುಡಿಯಬೇಡ ಎಂದು ಉಪದೇಶ ಮಾಡುತ್ತಾನೆ-ಆದರಿಂದ ನಿನಗೆ

ನಷ್ಟವಾಗುತ್ತದೆಂದಲ್ಲ, ಸೆರೆ ಮಾರುವವನಿಗೆ ಲಾಭರಾಗುತ್ತದೆಂದು ಅವನ ಸಂಕಟ; ತಪ್ಪಾದ ರೀತಿಯಲ್ಲಿ ಸರಿಯಾದ ನೀತಿಯನ್ನು ಹೇಳುವವನೇ ಮಡಿವಂತ.

**ಮದ್ಯ** ಕೆಲವರನ್ನು ಮುಳುಗಿಸಿರಬಹುದು-ನೀರು ಅದೆಷ್ಟು ಹಡಗುಗಳನ್ನು ನುಂಗಿದೆಯೊ ? ಮದ್ಯವನ್ನು ಕುಡಿಸಿ ಕೊಂದು ಮಿತ್ರನಾಗಿರುವುದನ್ನು ಬಿಟ್ಟು, ವಿಷವನ್ನು ಕುಡಿಸಿ ಕೊಂದು ಶತ್ರುವಾಗುವವನು ಶುದ್ಧ ಮೂರ್ಖ.

**ಮದ್ಯಸಾರ** ಮದ್ಯಸಾರದಲ್ಲಿ ಐಯೋಡಿನ್, ಮತ್ತು ಕೆಲವು ಘನಪದಾರ್ಥಗಳು ಕರಗುತ್ತವೆಂದು ವಿಜ್ಞಾನಿಯು ಹೇಳುತ್ತಾನೆ-ತಂದೆಯ ಧನ ಮತ್ತು ತನ್ನ ಮಾನ ತಪ್ಪದೆ ಕರಗುತ್ತವೆಂಬುದು ಅಜ್ಞಾನಿಗೂ ತಿಳಿದಿದೆ.

**ಮದುವೆ** ಸುಸಂಸ್ಕೃತಿಯ ಬೀಜಾಕ್ಷರ; ಮದುವೆಯಾಗುವುದು ಒಳ್ಳೆಯದೆಂದು ಮದುವೆಯಾಗದವನು ಅನುಭವ ದಿಂದ ಹೇಳುತ್ತಾನೆ-ಮದುವೆಯಾಗದೆ ಇರುವು ದೇನು ಕೆಟ್ಟದಲ್ಲ ಎಂದು ಮದುವೆಯಾದವನು ಅನುಭವದಿಂದಲೇ ಹೇಳುತ್ತಾನೆ; ಸಂಪನ್ನರು ಬೇಗ ಮದುವೆಯಾಗುತ್ತಾರೆ-ಜಾಣರು ತಡವಾಗಿಯೂ ಆಗುವುದಿಲ್ಲ; ತಾನು ಪ್ರೇಮಿಸುವವಳನ್ನು ಮದುವೆಯಾಗುವದಕಿಂತಲೂ ತನ್ನನ್ನು ಪ್ರೇಮಿಸು ವವಳನ್ನು ಮದುವೆಯಾಗುವುದು ಹೆಚ್ಚು ಲಾಭಕರ; ಪ್ರತಿ ಹೆಂಣೂ ಮದುವೆಯಾಗಲೇ ಬೇಕು-ಪ್ರತಿ ಗಂಡೂ ಆಗಬಾರದು; ಮದುವೆಯಾಗಲಿರುವವನಿಗೆ ಒಂದೇ ಕಿವಿ ಮಾತು ಇದೆ-ಮದುವೆಯಾಗಬೇಡ; ಮದುವೆ ಲಾಟರಿ-ಗಂಡಿನ ಸ್ವಾತಂತ್ರ್ಯ ಮತ್ತು ಹೆಂಣಿನ

ಸುಖಿ, ಎರಡರಲ್ಲಿ ಒಂದು ಮಾತ್ರ ಗೆಲ್ಲಬೇಕು; ಮದುವೆಯಾದ ಮರುದಿನವೇ ಮಗನು ಮುದುಕನಾಗುತ್ತಾನೆ: ಮದುವೆ ಅವಶ್ಯವೇ ಎಂಬುದು ದಡ್ಡ ಪ್ರಶ್ನೆ-ಅವಶ್ಯವಾಗಿದ್ದರೆ ಇಷ್ಟು ಜನರೇಕೆ ಮದುರೆಯಾಗುತ್ತಿದ್ದರು ? ಕೆಲವರು ಮೂರ್ಖರಾಗಿ ಮದುವೆಯಾಗುತ್ತಾರೆ- ಉಳಿದವರು ಮದುವೆಯಾಗಿ ಮೂರ್ಖರಾಗುತ್ತಾರೆ; ಮದುವೆಯಾದವರಲ್ಲಿ ಪುರುಷರಕಿಂತಲೂ ಸ್ತ್ರೀಯರೇ ಹೆಚ್ಚು; ಮದುವೆಯಾದ ಮೇಲೆಯೇ ಮಕ್ಕಳಾಗುವುದು ಒಳಿತು; ಅವಸರದಲ್ಲಿ ಮದುವೆಯಾದರೆ ಸವುಡು ದೊರೆತಾಗ ಪೇಚಾಡ ಬೇಕಾಗುತ್ತದೆ-ಮದುವೆಯಾದನಂತರ ಸವುಡು ಎಲ್ಲಿದೆ ? ಮದುವೆ ಮತ್ತು ಆತ್ಮಹತ್ಯ ಮಾಡಿಕೊಳ್ಳುವ ಮುನ್ನ ಯೋಚಿಸುತ್ತ ಕುಳಿತರೆ ಮುಂದಿನ ಕಾರ್ಯವು ಆಗುವುದಿಲ್ಲ; ಮದುವೆಯಾಗುವವರೆಗೂ ಕಣ್ಣು ತೆರೆದಿರಬೇಕು-ನಂತರ ಅರ್ಧ ಮುಚ್ಚಬೇಕು, ಉಳಿದರ್ಧವನ್ನೂ ಮತ್ತೂ ಬಾಯನ್ನೂ ಅವಳೇ ಮುಚ್ಚುತ್ತಾಳೆ; ಒಬ್ಬಳಿಗಿದ್ದ ಇಬ್ಬರು ಮಕ್ಕಳಲ್ಲಿ ಒಬ್ಬನು ಯುದ್ಧಕ್ಕೆ ಹೋದ, ಇನ್ನೊಬ್ಬ ಮದುವೆಯಾದ-ಯುದ್ಧಕ್ಕೆ ಹೋಗಿದ್ದವನು ಎಂದೊ ಒಂದು ದಿನವಾದರೂ ಹಿಂದಕ್ಕೆ ಬಂದ; ಪ್ರಣಯವು ಸಾಕಾದ ಮೇಲೆ ಮದುವೆಯೇ ಗತಿ; ಅವಸರದಲ್ಲಿ ಹೆಣ್ಣು ಮದುವೆಯಾಗಬೇಕು-ಅವಶ್ಯವಿದ್ದಲ್ಲಿ ಮಾತ್ರ ಗಂಡು ಮದುವೆಯಾಗಬೇಕು; ಮದುವೆಯಾದವನ ಬಾಳು ಆರಂಭದಲ್ಲಿ ಕಾವ್ಯ, ಮಧ್ಯದಲ್ಲಿ ಗದ್ಯ, ಕಟ್ಟ ಕಡೆಗೆ ವ್ಯಾಕರಣ; ಮದುವೆಯಾಗುವ ಮುಂಚೆ ಕೈಕೈ ಹಿಡಿದು ಓಡಾಡಿದರೆ, ಮದುವೆಯಾದ ನಂತರ ಕಟ್ಟಿಗೆ ಹಿಡಿದು

ಸಿಲ್ಲಬೇಕಾಗುತ್ತದೆ, ಎರಡನೆ ಮದುವೆಯಾದವನಲ್ಲಿ ಅನುಭವದ ಉಪಯೋಗದ ಕಿಂತಲೂ ಹೆಚ್ಚು ಆಶಾವಾದವೇ ಇರುತ್ತದೆ. ಹೆಂಡಂದಿರ ತಪ್ಪಿನಿಂದಲೇ ಮದುವೆಯ ಸುಖವು ಹಾಳಾಗುತ್ತದೆ — ಬೋನಿನಲ್ಲಿಡುವ ಪ್ರಾಣಿಯನ್ನು ಪಂಜರದಲ್ಲಿಟ್ಟರೆ ? ಎರಡು ಜೊತೆ ಕಾಲುಗಳು ಒಂದೆಡೆ ಬಂದರೆ ಮದುವೆಯಲ್ಲ-ಎರಡು ಹೃದಯಗಳನ್ನು ಕಸಿಮಾಡಿ ಸುಖದ ಕೀಲು ತಿರುವಬೇಕು; ಅಡುಗೆ ಕೆಟ್ಟರೆ ಅರ್ಧದಿನ ದುಃಖ, ಬೆಳೆ ಕೆಟ್ಟರೆ ವರ್ಷವೆಲ್ಲ ದುಃಖ, ಮದುವೆ ಕೆಟ್ಟರೆ ಇನ್ನೊಂದಾಗುವವರೆಗೂ ಮಾತ್ರವೆ ದುಃಖಃ ಮದುವೆ ಇದ್ದಿರದಿದ್ದರೆ ವ್ಯಭಿಚಾರವೆಲ್ಲಿರುತ್ತಿತ್ತು ? ಮಗನು ಬೇಕೆನ್ನುವ ಮುಂಚೆಯೇ ಅವನಿಗೆ ಮದುವೆ ಮಾಡು-ಮಗಳಿಗೆ ಇನ್ನೂ ಕೊಂಚ ಮುಂಚಿತವಾಗಿಯೆ ಮಾಡಿಬಿಡು; ಮೊದಲ ಮದುವೆಗೆ ತಂದೆ ತಾಯಿಗಳು ಕಾರಣ, ಎರಡನೆಯದಕ್ಕೆ ಬಂಧು ಬಳಗದ ಒತ್ತಾಯ, ಮೂರನೆಯದಕ್ಕೆ ತನ್ನ ಸ್ವಂತ ಅವಿವೇಕ, ನಾಲ್ಕು, ಐದು, ಆರು, ಏಳು ಕೇವಲ ಅಭ್ಯಾಸ ಬಲದಿಂದ ಆಗುತ್ತವೆ; ಚಿಕ್ಕವನಿದ್ದಾಗ ಮದುವೆಯಾದರೆ ಬಹು ಬೇಗ ಆದಂತೆ-ದೊಡ್ಡವನಾದ ಮೇಲೆ ಆದರೆ ಬಹು ತಡವಾಗಿ ಆದಂತೆ; ಮದುವೆಯಾದವರಲ್ಲಿಯೂ ಕೂಡ ಕೆಲವರು ಸುಖವಾಗಿದ್ದಾರೆ-ಅವರ ಸುಖಕ್ಕೆ ಕಾರಣ ಮದುವೆಯಲ್ಲ; ಇರಳು ಬೀಳುವ ಬಾವಿಯನ್ನು ಹಗಲೇ ಕಾಣುವುದಕ್ಕೆ ಮದುವೆಯೆಂದು ಹೆಸರು; ಕೇವಲ ಹಣಕ್ಕಾಗಿ ಮದುವೆಯಾಗುವವನು ಅಯೋಗ್ಯ-ಕೇವಲ ಪ್ರೀತಿಗಾಗಿ ಆಗುವವನು ಅವಿವೇಕ; ಮಾಡಲು

ಕೆಲಸವಿಲ್ಲದವನು ಮದುವೆಯಾಗುವುದೇ ಒಳ್ಳೆಯ ಕೆಲಸ; ಬ್ರಹ್ಮಚಾರಿಯ ಮಕ್ಕಳಿಗೆ ಮದುವೆ ಯಾಗುವುದು ಕಷ್ಟ; ನಾನು ಮದುವೆಯಾಗದೆ ಬಾಳುತ್ತೇನೆ ಎನ್ನುವ ಮೂರ್ಖನಿಗೆ ಹುಟ್ಟುವ ಅಧಿಕಾರವನ್ನು ಯಾವ ಜಾಣ ಕೊಟ್ಟ ? ಪ್ರೇಮಿಸದೆ ಮದುವೆಯಾಗಬೇಡ-ಆದರೆ ಸರಿಯಾದವಳನ್ನೆ ಪ್ರೇಮಿಸು; ಮದುವೆ ಎಂಬುದೊಂದು ಸಿಹಿ ನೀರಿನ ಬಾವಿ-ಒಳಗಿಳಿದವನ ದಾಹವು ಹೋಗುತ್ತದೆ, ಆದರೆ ಹೊರಬರಲು ಮಾತ್ರ ಅವನಿಂದಾಗುವುದಿಲ್ಲ; ಮದುವೆಯಾದ ಮೇಲೂ ಮಕ್ಕಳಾಗದವಳು, ಮಕ್ಕಳಾದ ಮೇಲೂ ಮದುವೆಯಾಗದವಳಕಿಂತಲೂ ಹೆಚ್ಚು ದುಃಖಿಯಾಗುತ್ತಾಳೆ; ಎತ್ತು ಅತ್ತ ಎಳೆ ಯುತ್ತದೆ, ಕತ್ತೆ ಇತ್ತ ಎಳೆಯುತ್ತದೆ-ಆದರೂ ಮಧ್ಯೆ ಯಾರೂ ಬರಕೂಡದು ಎನ್ನುವುದೇ ಮದುವೆ; ಬಹು ಬೇಗ ಮದುವೆಯಾದವನು ಸುಖವನ್ನು ಕೊಡಲಾರ-ಬಹುತಡವಾಗಿ ಆದವನು ಪಡೆಯಲಾರ; ಮದುವೆಯಾಗುವುದು ಏಕೆ ಎನ್ನುವುದನ್ನೇ ತಿಳಿಯದವನು ಯಾವಳನ್ನು ಮದುವೆಯಾದರೂ ಅಷ್ಟೆ; ನೂರು ಸುಳ್ಳು ಹೇಳಿ ಒಂದು ಮದುವೆಯನ್ನು ಮಾಡು ಎಂಬುದೊಂದು ಗಾದೆ ಮಾತು-ಮದುವೆಯಾದವನು ಹೆಂಡತಿಗೆ ನಿತ್ಯವೂ ಹೇಳುವ ಸಾವಿರ ಸುಳ್ಳುಗಳಿಗೆ ಇದೇ ಬುನಾದಿ !

**ಮಧುರಮ್ಮ** ಕುಡುಕನ ಹೆಂಡತಿ.

**ಮನಸ್ಸು** ಕೊಟ್ಟುದನ್ನೇ ತಿನ್ನುತ್ತದೆ-ತಿಂದುದನ್ನೇ ಬೇಡುತ್ತದೆ; ಮರೆಯಲು ಕಲಿಯದವನ ಮನಸ್ಸು ಮಾರಿಯ ತವರೂರು ಆಗುತ್ತದೆ; ಮುಖ ತೊಳೆಯಲು ಮಳೆಯ ನೀರೂ ಸಾಕು-ಮನಸ್ಸು ತೊಳೆಯಲು

ಕಣ್ಣೀರೇ ಬೇಕು; ಮನಸ್ಸು ಬೆಳೆದಂತೆಲ್ಲ ದೇಹದ ಹಸಿವು ಕಡಿಮೆಯಾಗುತ್ತದೆ-ದೇಹವು ಬೆಳೆದಂತೆಲ್ಲ ಮನಸ್ಸಿನಗೆ ಹಸಿವೇ ಇಲ್ಲದಂತಾಗುತ್ತದೆ.

**ಮನುಷ್ಯ** ಮೀಸೆ ಬೆಳೆದ ಕೂಸು; ಅಸಂಸ್ಕೃತ ಕತ್ತೆಗಳು ಬೈದಾಡಿಕೊಳ್ಳುವ ಕೀಳುಮಾತು; ನಗುವ ಪ್ರಾಣಿ ನಗಿಸಿಕೊಳ್ಳುವ ಪ್ರಾಣಿ ಕೂಡ; ಮನುಷ್ಯನಾಗಿ ಮಾಡಲಾರದ ಒಳಿತನ್ನು ಮಂತ್ರಿಯಾಗಿ ಮಾಡಲು ಸಾಧ್ಯರೆ? ಮನುಷ್ಯನಾಗಿ ಹುಟ್ಟಿದ ಮೇಲೆ ಸುತ್ತಿಗೆಯಾಗಿ ಹೊಡೆಯಬೇಕು, ಇಲ್ಲವೆ ಅದ್ಗಣಿಯಾಗಿ ಹೊಡೆಯಿಸಿಗೊಳ್ಳಬೇಕು; ದೇವನು ಮನುಷ್ಯನನ್ನು ಮಾಡುತ್ತಾನೆ-ದರ್ಜಿ, ದೋಭಿ ದೊಡ್ಡಮನುಷ್ಯನನ್ನು ಮಾಡುತ್ತಾರೆ; ಪ್ರತಿ ಮನುಷ್ಯನ ಜೀವನವೂ ಒಂದು ಮಹಾ ಗ್ರಂಥವೇ-ಅದನ್ನು ಓದಬಲ್ಲವನಿಗೆ ಮಾತ್ರ; ತತ್ತಿಯ ರೂಪದಲ್ಲಿರುವ ದೇವನೆ ಮನುಷ್ಯ; ಮನಸ್ಸಿನಂತೆ ಮನುಷ್ಯ-ಮನುಷ್ಯನಂತೆ ಮಹಾದೇವ- ಮಹಾದೇವ ನಂತೆ ಮನುಷ್ಯನ ಮನಸ್ಸು; ಮನುಷ್ಯನು ಎಷ್ಟೆಷ್ಟು ಬೇಗ ಬದಲಿಸುತ್ತಾನೋ ಅಷ್ಟಷ್ಟು ಬೇಗ ಮೊದಲಿ ನಂತೆಯೆ ಆಗುತ್ತಾನೆ; ಮೋಟಾರು ಕಾರುಗಳಲ್ಲಿರು ವಂತೆ ಮಹುಷ್ಯರಲ್ಲಿಯೂ ಮೂರು ಜಾತಿಗಳಿವೆ-ಆಕಸ್ಮಾತ್ತಾಗಿ ಕಾಲು ತಗುಲಿದರೆ ತಾನೇ 'ಸ್ಟಾರ್ಟ್' ಆಗಿ ಓಡುವುದೊಂದು, ಬುದ್ಧಿಪೂರ್ವಕವಾಗಿ ಸ್ಟಾರ್ಟ್ ಮಾಡಿದರೆ ಓಡುವುದಿನ್ನೊಂದು, ದೂಡಿದ ಮೇಲೆಯೇ ಕದಲುವುದು ಮೂರನೆಯದು-ದೂಡಿದರೂ ಜಾಗ ಬಿಡದಿರುವುದು ಕಾರೂ ಅಲ್ಲ, ಮನುಷ್ಯನೂ ಅಲ್ಲ-ಭಂಡ ಅಳಿಯ; ಹುಚ್ಚು ಹಿಡಿದು ಭೂಮಿಗೆ ಇಳಿದ ದೇವನೇ ಮನುಷ್ಯ-ಒಮ್ಮೊಮ್ಮೆ ಅವನಲ್ಲಿ ದೈವತ್ವವನ್ನು

ಕಾಣಬಹುದು; ಪಶುಗಳ ಸೃಷ್ಟಿ ಮುಗಿದೊಡನೆಯೆ ದೇವನು ಮನುಷ್ಯನ ಸೃಷ್ಟಿಯನ್ನು ಆರಂಭಿಸಿದನಂತೆ-ಕೆಲವು ಮನುಷ್ಯರನ್ನು ನೋಡಿ ದಾಗ, ಇದು ನಿಜವೆನ್ನಿಸುತ್ತದೆ; ಮನುಷ್ಯನ ಬಾಳು ಒಂದು ಪುಸ್ತಕವಿದ್ದಂತೆ-ಪುಸ್ತಕದ ಆರಂಭದಲ್ಲಿ ಮತ್ತು ಕೊನೆಯಲ್ಲಿ ಬಿಳಿ ಕಾಗದವಿರುವಂತೆ ಬಾಳಿನ ಆರಂಭದಲ್ಲಿ ಶೈಶಾವಾವಸ್ಥೆ ಮತ್ತು ಕೊನೆಯಲ್ಲಿ ವೃದ್ಧಾಪ್ಯಗಳಿವೆ.

**ಮನೆ** ಸಾಲವನ್ನು ಮಾಡಿ ಮನೆ ಕಟ್ಟಿಸುವವನು ಮನೆಯಿಂದ ಓಡಿ ಹೋಗಲು ಮೊದಲು ದಾರಿ ಮಾಡಿ ಕೊಳ್ಳುತ್ತಾನೆ; ಮನೆ ಇಲ್ಲದವನಿಗೆ ಮನಶ್ಯಾಂತಿ ಇಲ್ಲ-ಮನೆ ಇದ್ದರೆ, ಅಲ್ಲಿ ಮಡದಿಯನ್ನು ಸ್ಥಾಪಿಸಿ ಹೊರ ಜಾರ ಬಹುದು; ಸ್ವಂತ ಮನೆ ಇರುವುದು ಬಸವನ ಹುಳುವಿಗೊಂದೆ; ಮನೆಯಲ್ಲಿದ್ದ ಮಾತ್ರಕ್ಕೆ ಗೃಹಸ್ಥನಾಗಲಿಲ್ಲ-ಮಠದಲ್ಲಿದ್ದ ಮಾತ್ರಕ್ಕೆ ಸನ್ಯಾಸಿ ಯಾಗಲಿಲ್ಲ; ಬರಿಗೈಯಿಂದ ಬಂದರೆ ತನ್ನ ಮನೆಯೂ ತನ್ನವಲ್ಲ; ಹೊಸ್ತಿಲು ಇದ್ದಲ್ಲಿ ತಪ್ಪದೆ ದೇವನು ಇರುತ್ತಾನೆ; ಜಗತ್ತಿನಲ್ಲಿ ಅತಿ ದೊಡ್ಡವರಾದರೂ ಬಹು ಚಿಕ್ಕವರಾಗಿ ಕಾಣಲ್ಪಡುವ ಸ್ವಂತ ಸ್ಥಳವೇ ಮನೆ.

**ಮರಪಂಡಿತ** ರಾಮೋ ಲಕ್ಷ್ಮಣಮಬ್ರವೀತ್ ಎಂಬುದಕ್ಕೆ ಈ ಅರ್ಥವನ್ನು ಹೇಳಿದವನು:-

ರಾಮೋ - ಶ್ರೀರಾಮರೇ ರಾಮರು, ಪಟ್ಟಾಭಿ ರಾಮರು.

ಲಕ್ಷ್ಮಣ = ಲಕ್ಷ್ಮಣದೇವರು, ಇದ್ದಾರಲ್ಲ ನಮ್ಮ ಲಕ್ಷ್ಮಣ ದೇವರು.

ಅಬ್ರ = ಅಬ್ಬರವಾಗಿರುವ ಆಂಜನೇಯಸ್ವಾಮಿ.

ವೀೀೀ = ದೀರ್ಘವಾಗಿರುವ ಅವರ ಬಾಲ.

ತ್ = ಅವರ ತುದಿಯಲ್ಲಿರುವ ಘಂಟೆ, ಪುಟ್ಟ ಘಂಟೆ;

ಕುಂಡಲೀ ನಾಮ ನಗರೀ ಎಂಬುದಕ್ಕೆ ಈ ಅರ್ಥವನ್ನು ಹೇಳಿದ ಪಂಡಿತ :-

ಕುಂಡಲೀ = ಕುಂಡಲೀ. ತಿಳಿಯಿತೋ ಇಲ್ಲವೋ ಹೂಂ, ಬೆನ್ನಿನ ಕೆಳಗಡೆ

ನಾಮ = ನಾಮ, ಗಂಧದ ನಾಮಗಳನ್ನು ಹಚ್ಚಿಗೊಂಡರೆ

ನಗರಿ = ನಗರೆ ? ನಗದೆ ಇದ್ದಾರೆಯೇ ?

**ಮರೆ** ತಮ್ಮಿಂದಾದ ಅಪಕಾರವನ್ನು ಕೆಲವರು ಬಹು ಬೇಗ ಮರೆಯುತ್ತಾರೆ-ಆದರೆ ಇತರರಿಂದಾದ ಉಪಕಾರವನ್ನೂ ಅಷ್ಟೇ ಬೇಗ ಮರೆಯುತ್ತಾರೆ.

**ಮಲತಾಯಿ** ಅನುಗಾಲವೂ ಮಲಗುವ ತಾಯಿಯೇ ಮಲತಾಯಿ; ಮಲತಾಯಿ ಇರುವ ಮನೆಯಲ್ಲಿ ಹೆತ್ತ ತಂದೆ ಮಲ ತಂದೆಯಾಗಲು ಅದೆಷ್ಟು ಹೊತ್ತು ಬೇಕು ?

**ಮಲಗು** ಮಲಗುವ ಮುಂಚೆಯೇ ಏಳುವ ಚಿಂತೆ ಉಳ್ಳವನು ಏಳುವ ಮುಂಚೆಯೇ ಮಲಗುವ ಯೋಚನೆ ಮಾಡುತ್ತಾನೆ.

**ಮಹತ್ವಾಕಾಂಕ್ಷೆ** ಆತ್ಮಕ್ಕೆ ಬರುವ ಉದರರೋಗ.

**ಮಹದೇವ** ಮಹದೇವನೆ ಹಗ್ಗ ತಿನ್ನುವಾಗ, ಹನುಮಪ್ಪ ಶಾವಿಗೆ ಬೇಡಿದನಂತೆ.

**ಮಹಾನುಭಾವ** ದೇಶವೆಲ್ಲ ಹೊಗಳಿದರೆ ಸಾಲದು, ಮನೆಯವಳೂ ಒಪ್ಪಿಗೊಂಡರೇ ಆ ಮನುಷ್ಯ ಮಹಾನುಭಾವ.

**ಮಳೆ** ಬರಲೆಂದು ರೈತನು ಬೇಡುತ್ತಾನೆ, ಬೇಡವೆಂದು ನಾಟಕ ಕಂಪನಿಯವನು ಪ್ರಾರ್ಥಿಸುತ್ತಾನೆ - ಇಬ್ಬರಿಗೂ ಒಳ್ಳೆಯವನಾಗಲು ದೇವನಿಗೆ ಸಾಧ್ಯವಿಲ್ಲ.

**ಮಾಡು** ಮಾಡಬಲ್ಲೆ ಎನ್ನುವವನು ಇಂದಲ್ಲ, ಎಂದಾದರೂ ಮಾಡಬಹುದು - ಮಾಡಲಾರೆ ಎನ್ನುವವನು ಎಂದೆಂದಿಗೂ ಮಾಡಲಾರ; ಮಾಡಬಹುದಾದಾಗ ಮಾಡದಿದ್ದರೆ, ಮಾಡಲೇಬೇಕಾದಾಗ ಮಾಡಲಾಗುವುದಿಲ್ಲ; ಒಂದು ಕೆಲಸವನ್ನು ಮಾಡಲೇ ಬೇಕಾದರೆ ಅದಕ್ಕೊಂದೆ ಉಪಾಯ- ಮೊದಲು ಅದನ್ನು ಮಾಡಿಬಿಡು.

**ಮಾತನಾಡದೆ** ತಮಗೆ ಕ್ರಾಪು ಹೇಗೆ ಕತ್ತರಿಸಬೇಕು ಎಂದು ಕೇಳಿದಾಗ 'ಮಾತನಾಡದೆ' ಎಂದು ಹೇಳಿದ ತಿಂಮ.



**ಮಾತಿಗ** ಭಾಷಣಕಾರ-ಮಾದಿಗ ತತ್ಸಮ, ಮಾತಿಗ ತದ್ಭವ

**ಮಾತು** ಅನುಗಾಲವೂ ಒಂದೇ ಮಾತು ಆಡುವವನಿಗೆ ಅವಿವೇಕಿ ಎನ್ನುತ್ತಾರೆ; ಆಡಿಗೆ ಮಾತನಾಡಲು ಬಂದಿದ್ದರೆ ಆನೆಯಷ್ಟು ಎತ್ತರ ಆಡುತ್ತಿತ್ತು; ನಾನು ಆಡದ ಮಾತು ನನಗೆಂದೂ ಕೆಡುಕು ಮಾಡಿಲ್ಲ; ಇತರರೊಂದಿಗೆ ಮಾತು ಕಡಿಮೆ ಮಾಡಿ, ತನ್ನೊಂದಿಗೆ ತಾನು ಹೆಚ್ಚು ಆಡಿಕೊಂಡರೆ ಇತರರಿಗಿಂತಲೂ ತನಗೇ ಹೆಚ್ಚು ಒಳಿತು; ನಾಲಗೆ ಮಾತನಾಡಬಹುದು-ಆದರೆ ತಲೆಆಡಿಸಬೇಕು ಆ ಮಾತನ್ನು; ಮಾತು ಬಲ್ಲವನಿಂದ ಮಂದಿಯ ಮನೆ ಹಾಳು; ಆಡುವವರೆಗೂ ನೀನು ಆ ಮಾತಿನ ಒಡೆಯ-ಕೂಡಲೆ ಅದರ ಆಳು; ಬಹು ಮಾತನಾಡುವವನು ಬರೀ ಕೈಯಿಂದಲೇ ಉಣ್ಣಿಸುತ್ತಾನೆ; 'ಯಾರೋ ಎಂದರಂತೆ' ಎಂಬ ಮಾತೇ ಸುಳ್ಳಿಗೆ ನಾಂದಿ; ಮಾತನಾಡುವುದು ಮನದಲ್ಲಿರುವುದನ್ನು ಬಿಚ್ಚಿ ಇಡುವುದಕ್ಕಲ್ಲ-ಬಚ್ಚಿ ಇಡುವುದಕ್ಕೆ; ಕುಡಿದಾಗ ಆಡಿದ ಮಾತು ಸೆರೆ ಆಡಿದುದಲ್ಲ-ಮನದಲ್ಲಿದ್ದುದನ್ನೆ ಸೆರೆ ಆಡಿಸಿತು; ಮಾತುಗಳನ್ನು ಎಣಿಸಿ ನೋಡಬಾರದು-ತೂಕ ಮಾಡಿ ನೋಡಬೇಕು; ಆಡದಿರುವ ಮಾತಿನಷ್ಟು ಒಳ್ಳೆಯ ಮಾತು ಮತ್ತಾವುದಿದೆ? ಒಳ್ಳೆಯ ಮಾತಿನಿಂದ ಹೆಚ್ಚು ಒಳ್ಳೆಯದಾಗಲಿಕ್ಕಿಲ್ಲ-ಕೆಟ್ಟ ಮಾತಿನಿಂದ ಕೆಟ್ಟದಾಗುವುದು ಮಾತ್ರ ಖಂಡಿತ; ಒಳ್ಳೆಯ ಮಾತನ್ನಾಡುವವನು ಒಳ್ಳೆಯವನೇ ಇರಬಹುದು-ನಿನ್ನ ಜೇಬಿನ ಬಗ್ಗೆ ನೀನು ಎಚ್ಚರವಾಗಿರು; ಮಾತನಾಡದ ಬಾವಮ್ಮೈದುನನ ಬಗ್ಗೆ, ಬೊಗಳದ

ನಾಯಿಯ ಬಗ್ಗೆ ಎಷ್ಟು ಎಚ್ಚರವಾಗಿದ್ದರೆ ಅಷ್ಟು ಒಳಿತು; ಮಾತು ಅರಿತವನು ಮಾತನಾಡುತ್ತಾನೆ-ಅರಿವು ಉಳ್ಳವನು ಸುಮ್ಮನಿರುತ್ತಾನೆ; ಅತಿ ಮಾತಿನವನೂ ಸುಳ್ಳಾಡಬಾರದೆಂದರೆ ಜಗತ್ತಿನಲ್ಲಿ ಸುಳ್ಳೇ ಇಲ್ಲದಂತೆ ಆದೀತು; ತತ್ವಜ್ಞಾನಿಯಂತೆ ಮಾತನಾಡುವ ಅನೇಕರಲ್ಲಿ ತತ್ವವು ಇರುವುದೇ ಇಲ್ಲ, ಜ್ಞಾನವಂತೂ ಅದಕ್ಕೂ ಕಡಿಮೆ ಇರುತ್ತದೆ; ಮಾತನಾಡಲು ಬಾರದವರು ಅನೇಕರಿದ್ದಾರೆ-ಸುಮ್ಮನಿರಲು ಬಾರದವರು ?

**ಮಾತೃಭಾಷೆ** ಇತರ ಭಾಷೆಗಳನ್ನು ಕಲಿಯಲಾರದ ಹೆಡ್ಡನಿಗೆ ಮಾತೃಭಾಷಾ ದುರಭಿಮಾನವೇ ಹೆಚ್ಚು.

**ಮಾನ** ಹೆಂಣಿನ ಮಾನವನ್ನು ಕಾಯಲು ಗಂಡೇ ಬೇಕು-ಗಂಡಿನ ಮಾನವನ್ನು ಕಳೆಯಲು ಹೆಂಣೇ ಸಾಕು.

**ಮಾವ** ತಪ್ಪು ಮಾಡುವುದು ಮಾನವ ಧರ್ಮ-ಕ್ಷಮಿಸುವುದು ಮಾವನ ಕರ್ಮ.

**ಮಾವನ ಮನೆ** ಅಳಿಯನೆಂಬ ಹೋರಿ ಮೇಯುವ ಗೋದಲಿ.

**ಮಾಸ್ತರ** ಬಾಲವೈರಿ; ವಿದ್ಯಾರ್ಥಿಯಾಗುವ ಅರ್ಹತೆ ಇಲ್ಲದವನು ಮಾಸ್ತರನೇ ಆಗಬೇಕು; ತಾನು ಮರೆತುದನ್ನು ಇತರರಿಗೆ ಕಲಿಸುವವನೆ ಮಾಸ್ತರ; ಅಂದಿನ ದಡ್ಡ ವಿದ್ಯಾರ್ಥಿಯೆ ಇಂದಿನ ದೊಡ್ಡ ಮಾಸ್ತರ, ಮತ್ತು ಮುಂದಿನ ದೊಡ್ಡ ವಿದ್ಯಾರ್ಥಿಯ ದಡ್ಡ ತಂದೆ; ಮಾಸ್ತರರಲ್ಲಿ ಎರಡು ಜಾತಿಗಳು-ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳುತ್ತ ನಿದ್ರೆ ಮಾಡುವವರು, ಮತ್ತು ನಿದ್ರೆ ಮಾಡುವ ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳುವವರು; ಮಾಸ್ತರ ಕ.ಸಾ-ಮಾಸ್ತರ ಕನ್ನಡ ಸಾಲೆ.

**ಮಿತ್ರ** ಸಂಸ್ಕೃತ ಭಾಷೆಯಲ್ಲಿ ಸಾಲವನ್ನು ಕೇಳುವ ಗೆಳೆಯ.

**ಮಿತವ್ಯಯ** ಯಾವ ಬಗೆಯ ಆನಂದವನ್ನೂ ಅಪೇಕ್ಷಿಸದೆ ಹಣವನ್ನು ಕರ್ಚು ಮಾಡುವುದು; ಆತ್ಮಹತ್ಯೆ ಮಾಡಿಕೊಳ್ಳುವವನು ಉರಿಯಲ್ಲಿ ಬಿದ್ದು ಸತ್ತರೆ ಉಳಿದವರಿಗೆ ಅದೇ ಮಿತವ್ಯಯ.

**ಮಿತಿ** ಮಿತಿಯಕಿಂತಲೂ ಅತ್ಯುತ್ತಮ ಔಷಧಿ ಮತ್ತೊಂದಿಲ್ಲ-ಅತಿಯಕಿಂತಲೂ ಅತ್ಯದ್ಭುತ ರೋಗವು ಇನ್ನೊಂದಿಲ್ಲ.

**ಮಿಲಿಟರಿಗಳು** ಶಾಂತಿ ಕಾಲದಲ್ಲಿ ಮಿಲಿಟರಿ ಹೋಟಲಲ್ಲಿ ಉಣ್ಣುವವರೇ ಮಿಲಿಟರಿಗಳು.

**ಮೀಸೆ** ಮೀಸೆ ಇಲ್ಲದವನಿಂದ ಮುತ್ತು ತೆಗೆದುಕೊಳ್ಳುವುದು, ಸೋಪು ಇಲ್ಲದೆ ಮುಖ ತೊಳೆದಂತೆ; ಮೀಸೆಯೊಟ್ಟಿಗೆ ಮೆದುಳೂ ಬೆಳೆಯದಿದ್ದರೆ ಮೀಸೆಯದೇನು ತಪ್ಪು ? ತಂದೆಯಿಂದ ಮಗನಿಗೆ ಆನುವಂಶಿಕವಾಗಿ ಬರುವ ಆಸ್ತಿ-ಮಗಳಿಗೆ ಹಕ್ಕು ಇಲ್ಲ.

**ಮುಖ** ಗಂಡ, ಹೆಂಡಿರಲ್ಲಿ ಒಂದು ಮುಖಪೂರ್ವಕ್ಕೆ, ಮತ್ತೊಂದು ಪಶ್ಚಿಮಕ್ಕೆ ಆದರೇ ಒಳಿತು-ಈರ್ವರ ಮುಖಗಳೂ ಒಂದೇ ದಿಕ್ಕಿಗೆ ಆದರೆ ಗತಿ ? ಒಂದು ಕೆಟ್ಟ ಮನಸ್ಸಿನಕಿಂತಲೂ ನೂರು ಕೆಟ್ಟ ಮುಖಗಳು ಮೇಲು.

**ಮುಖಸ್ತುತಿ** ಅನೇಕ ಅವಿವೇಕಿಗಳು ಅಪೇಕ್ಷಿಸುವ ಆಹಾರ-ಆದರೆ ಜೀರ್ಣಿಸಿಕೊಳ್ಳಬಲ್ಲ ಜಾಣರಿಲ್ಲ; ಮುಖಸ್ತುತಿ ಒಂದು ಕೊಡೆಯಾಗಬಹುದಾಗಲಿ ಮಾಳಿಗೆ ಹೇಗೆ ಆದೀತು ?

**ಮುಗಿಲು** ಎಷ್ಟು ಎತ್ತರ ಮನೆ ಕಟ್ಟಿದರೂ ಮುಗಿಲ ಕೆಳಗೇ ಕಟ್ಟಬೇಕು, ಪಾಪ !

**ಮುಚ್ಚು** ಮುಂದೆಂದಾದರೂ ಹತ್ತು ಜೇಲುಗಳನ್ನು ಮುಚ್ಚುವ ಯೋಜನೆ ಇದ್ದರೆ, ಇಂದೇ ಒಂದು ಶಾಲೆಯನ್ನು ತೆರೆ.

**ಮುತ್ಸದ್ದಿ** ಸದ್ದಿಲ್ಲದೆ ಮುತ್ತು ಕೊಡುವವನೆ ಮುತ್ಸದ್ದಿ.

**ಮುತ್ತು** ಕದ್ದು ಪಡೆದವ ಉತ್ತಮ ಕಾಮಾರ್ಥಿ, ಕೊಂಡು ಪಡೆದವ ಮಧ್ಯಮ ಕರ್ಮಾರ್ಥಿ, ಬೇಡಿ ಪಡೆದವ ಅಧಮ ಧರ್ಮಾರ್ಥಿ; ಪರತು ಕೊಡಲು ಎಂತಹ ಜಿಪುಣನೂ ಹಿಂಜರಿಯದಂತಹ ಸಂಪತ್ತು.

**ಮುದ್ರಾರಾಕ್ಷಸ** ಮುದ್ರೆಗಳನ್ನು ಬಡಿದುಕೊಳ್ಳುವ ರಾಕ್ಷಸ, ಅರ್ಥಾತ್ ಹುಟ್ಟಿಸಿಂದಲೆ ವೀರಶೈವವನ್ನು ದ್ವೇಷಿಸುವ ಮೂರ್ಖ ಮಧ್ವ ಬ್ರಾಹ್ಮಣ; ವಿಭೂತಿ ನೋಡಿರಿ.

**ಮುದಿ** ಮುದಿ ಗಂಡನ ಮೈ ಚರ್ಮವು ಕಿರಿ ಗಂಡನ ಕಾಲ್ಮರಿಯಾಗುತ್ತದೆ.

**ಮುದುಕ** ಮುದುಕರು ಸಾಯದೆ ಇದ್ದಿದ್ದರೆ ಒಬ್ಬರ ಮಾತು ಇನ್ನೊಬ್ಬರಿಗೆ ಕೇಳಿಸುತ್ತಲೆ ಇರಲಿಲ್ಲ-ಜಗತ್ತಿನ ತುಂಬ ಬರೀ ಕೆಮ್ಮು, ಕೆಮ್ಮು, ಕೆಮ್ಮು!

**ಮುನ್ನುಡಿ** ಕೇಳಿದರು ಕೊಡದವನು ರೂಢಿಯೊಳಗುತ್ತಮನು, ಕೇಳಿದರೆ ಕೊಡುವವನು ಮಧ್ಯಮನು, ಅಧಮ ತಾ ಕೇಳದಲೆ ಕೊಡುವವನು ತಿಂಮಜ್ಞ;
ತನ್ನನ್ನು ತಾನೇ ಹೊಗಳಿಕೊಳ್ಳಲು ಧೈರ್ಯವೂ, ತನ್ನನ್ನು ತಾನೇ ಹಳಿದುಕೊಳ್ಳಲು ಇಷ್ಟವೂ ಇಲ್ಲದ ಹೇಡಿಯು ತನ್ನ ತೀರ್ಥವನ್ನು ಇನ್ನೊಬ್ಬರ ಶಂಖ ದಿಂದ ಹಾಕಿಸಿಕೊಂಡು ಕುಡಿಯುವ ಧರ್ಮದ ನೀರು.

**ಮುಲ್ಲಾ** ಅಲಾರಂ ಹೊಡೆಯುವ ಊರ ಗಡಿಯಾರ; ಅಲ್ಲಾನ ಮೆಚ್ಚುಗೆ ಪಡೆಯಬಹುದು-ಮುಲ್ಲಾನನ್ನು ಮೆಚ್ಚಿ ಸುವದು ಕಷ್ಟ.

**ಮುಸುಕು** ಮುಖದಕಿಂದಲೂ ಮುಸುಕೇ ಹೆಚ್ಚು ಹೇಳುತ್ತದೆ.

**ಮೂಕ** ಮೂಕನಂತಿರು - ಮಹಾತ್ಮನೆಂದು ತಿಳಿದುಕೊಳ್ಳು ತ್ತಾರೆ; ಮಾತನಾಡಿ ಮೂರ್ಖನಾಗುವ ಬದಲು, ಮೂರ್ಖನಾಗಿ ಮಾತನಾಡದಿರುವದು ಮೇಲಲ್ಲವೆ ?

**ಮೂಕಿ** ಮೂಕಿಗೆ ಮದುವೆ ಮಾಡು, ನಾಲಗೆ ತಾನೇ ಬರುತ್ತದೆ-ಗಂಡನನ್ನಂತೂ ಜೈಯು ಬೇಕಲ್ಲ ಹೇಗೂ.

**ಮೂರ್ಖ** ಜಾಣನನ್ನು ನೋಡಿ ನಗುವ ಅಧಿಕಾರವು ಮೂರ್ಖನಿಗೊಬ್ಬನಿಗೇ ಇದೆ; ಮೂರ್ಖನ ದಾರಿ ಮೂರ್ಖನಿಗೇ ಸರಿ-ಎಲ್ಲರಿಗೂ ಇರುವಂತೆ; ಮೂರ್ಖನು ಜಾಣನಿಂದ ಕಲಿಯುವದಕ್ಕಿಂತಲೂ ಜಾಣನೇ ಮೂರ್ಖನಿಂದ ಹೆಚ್ಚು ಕಲಿಯುತ್ತಾನೆ-ಯಾರಿಂದ ಹೆಚ್ಚು ಉಪಯೋಗ ? ಮೂರ್ಖನನ್ನು ವರ್ಣಿಸುವದು ಬಹು ಸುಲಭದ ಕೆಲಸ ಅನೇಕರಿಗೆ-ಆತ್ಮ ಚರಿತ್ರೆ ಹೇಳಿದರಾಯಿತು ಅವರು; ಹೆಂಡತಿಯನ್ನು ಇದುರಿನಲ್ಲಿ ಹೊಗಳದವನಕಿಂತಲೂ ದೊಡ್ಡ ಮೂರ್ಖನಾರು ? ಮೇಲೆ ಪರಲು ಏಣಿಯು ಕಣ್ಮುಂದೆಯೇ ಇದ್ದರೂ ಕೆಳಗಿಳಿಯಲು ಹಗ್ಗವನ್ನು ಹುಡುಕುತ್ತಾನೆ ಮೂರ್ಖ; ಮಳೆಯಲ್ಲಿ ಪಟಾಕಿ ಹಾರಿಸುವವನು ; ಎಲ್ಲರೂ ಒಮ್ಮಿಲ್ಲೊಮ್ಮೆ ಮೂರ್ಖರಾಗಿರುತ್ತಾರೆ-ಅನುಗಾಲವೂ ಮೂರ್ಖರಾಗಿರಲು ಕೇವಲ ಕೆಲವರಿಗೆ ಮಾತ್ರವೇ ಸಾಧ್ಯ; ಮೂರ್ಖನ ಕತ್ತಿನಲ್ಲಿ ಗಂಟೆ ಕಟ್ಟಬೇಕಿಲ್ಲ-ದೇವನು ಕೊಟ್ಟ ನಾಲಿಗೆ ಇದೆ ಅವನಿಗೆ: ತನ್ನನ್ನು ಮೆಚ್ಚುವ ಮೂರ್ಖನು ಪ್ರತಿಯೊಬ್ಬ ಮೂರ್ಖನಿಗೂ ದೊರೆಯುತ್ತಾನೆ; ವಿದ್ಯಾವಂತ ಮೂರ್ಖನು ಅವಿದ್ಯಾವಂತ ಮೂರ್ಖನಕಿಂತಲೂ ಹೆಚ್ಚು ಮೂರ್ಖನಾಗಿರುತ್ತಾನೆ; ತಪ್ಪು ಮಾಡುವವ

ರೆಲ್ಲರೂ ಮೂರ್ಖರಲ್ಲ-ಮಾಡಿದ ತಪ್ಪಿನಿಂದ ಪನನ್ನೂ ಕಲಿಯದವನು ಮಹಾ ಮೂರ್ಖ; ಸುಖಿಯೆಂದು ತಿಳಿದವರೆಲ್ಲರೂ ಸುಖಿಗಳೇ, ಜಾಣರೆಂದು ತಿಳಿದವರೆಲ್ಲರೂ ಜಾಣರಲ್ಲ-ಅದರಲ್ಲಿ ಮೂರ್ಖರೇ ಹೆಚ್ಚು.

**ಮೂಗು** ನೆಗಡಿಯಾದಾಗಲೆ ಮೂಗಿನ ನೆನಪು-ತೊಂದರೆ ಕೊಡದವನನ್ನು ಕೊಂದರೆ ಮಾತ್ರ ಕೇಳುವವರಾರು ? ಮೂಗು ಕೊಟ್ಟ ಮಹಾತ್ಮರು ಹೋದರು, ಮೂಗುತಿ ಕದಿಯುವ ಮಾತುಗಾರರು ಉಳಿದರು-ಯಾವುದಕ್ಕಾಗಿ ಹೆಚ್ಚು ಅಳಬೇಕು ?

**ಮೃತ್ಯು** ಕೊಲ್ಲುವ ಸತ್ಕಾರ್ಯವನ್ನು ತಾನೇ ಮಾಡಿದರೂ ಆ ಕೀರ್ತಿಯನ್ನು ಮಾತ್ರ ತಪ್ಪದೆ ಇನ್ನೊಂದಕ್ಕೆ ಕೊಡುತ್ತದೆ-ಉದಾ: ಟೈಫಾಯ್ಡು, ಕ್ಷಯ, ಕಾಲರಾ ಅಪಘಾತ, ಪ್ರಾಣ ಹೋಗುವುದು ಇತ್ಯಾದಿ ಇತ್ಯಾದಿ.

**ಮೃತ್ಯುಂಜಯ** ಸಾವಿಗೆ ಅಂಜದವನು, ಅರ್ಥಾತ್ ಸದಾ ಕಾಯಿಲೆ ಪ್ರಾಣಿ.

**ಮೆದುಳು** ಉಳ್ಳವನು ಇಲ್ಲದವನಲ್ಲಿ ಗುರುತಿಸುವ ಎಲ್ಲೂ ಇಲ್ಲದವಸ್ತು; ಮೀಸೆ ನೋಡಿರಿ.

**ಮೆರವಣಿಗೆ** ಮೆರವಣಿಗೆ ಇಲ್ಲವೆಂದು ಮುಂಚಿತವಾಗಿಯೆ ತಿಳಿಸಿದರೆ ಮದುವೆಯಾಗುವವರೂ ಇಲ್ಲ, ಚುನಾವಣೆಗೆ ನಿಲ್ಲುವವರೂ ಇಲ್ಲ, ಸಾಯುವವರೂ ಇಲ್ಲ-ಮೇಳದವರು ಮಾತ್ರವೆ ಕೂಳಿಲ್ಲದೆ ಸಾಯುತ್ತಾರೆ.

**ಮೇಯರ್** ಊರನ್ನು ಮೇಯುವವರೇ ಮೇಯರ್.

**ಮೇಲು** ತನ್ನ ಪಕ್ಕದ ಮನೆಯವನಕಿಂತಲೂ ತಾನು ಮೇಲು ಎಂದು ತಿಳಿದುಕೊಳ್ಳದ ಅವಿವೇಕಿಯು ಇನ್ನೂ ದೊರೆತಿಲ್ಲವಂತೆ ತಿಂಮನಿಗೆ.

**ಮೈದಾನ** ಮೈ ದಾನ — ವ್ಯ ಭಿ charity.

**ಮೈಲಿಗೆ** ಮೈಯಿಂದ ಬಂದುದೆಲ್ಲವೂ ಮೈಲಿಗೆಯೆ ಎಂದಾಗ ಈ ಮೈ ಮಡಿಯಾಗುವುದು ಮಡಿದ ಮೇಲೆಯೇ!

**ಮೋಟಾರು ಕಾರು** ಮೋಟಾರು ಕಾರಿನಿಂದ ಒಂದು ಮಹದುಪಕಾರವಾಗಿದೆ-ಕಾರಿನಲ್ಲಿ ಬಂದು ಊರು ಸೇರಿದ ನಂತರ ಸಾಮಾನುಗಳಿಗಾಗಿ ಕಾಯಬೇಕಿಲ್ಲ, ಏಕಕಾಲಕ್ಕೆ ಹೊರಟು ಎತ್ತಿನ ಗಾಡಿಯಲ್ಲಿ ಮುಂಚಿತವಾಗಿಯೆ ಬಂದು ಊರು ತಲುಪಿರುತ್ತವೆ.

**ಮೋಸ** ಮೋಸ ಮಾಡಿಸಿಕೊಳ್ಳಲು ಒಂದೇ ಒಂದು ಉಪಾಯ-ನನ್ನಂತಹ ಜಾಣನನ್ನು ಅದಾವನು ಮೋಸಮಾಡಬಲ್ಲ ಎಂದು ಮನದಲ್ಲಿ ಅಂದು ಕೊಂಡರೆ ಸಾಕೇ ಸಾಕು; ಜಗತ್ತಿನಿಂದ ಮೋಸ ವೊಂದನ್ನು ತೆಗೆದುಬಿಟ್ಟರೆ ವ್ಯಾಪಾರವಿಲ್ಲ, ವಕೀಲರಿಲ್ಲ, ಡಾಕ್ಟರರಿಲ್ಲ, ಸ್ತ್ರೀಯರಿಲ್ಲ, ದೇಶಭಕ್ತರಿಲ್ಲ, ದೇವನೂ ಇಲ್ಲ- ಉಳಿಯುವವರು ಬರೀ ಮಾಸ್ತರರು ಮತ್ತು ಮಕ್ಕಳು; ಮೋಸ ಮಾಡಲು ಕಲಿತಿರಬೇಕು-ಮಾಡಬಾರದು; ಒಂದು ಬಾರಿ ನಿನಗೆ ಒಬ್ಬನು ಮೊಸಮಾಡಿದರೆ ಅವನು ದ್ರೋಹಿ-ಎರಡನೆ ಬಾರಿಯೂ ಅವನೇ ಮಾಡಿದರೆ ನೀನು ಮೂರ್ಖ; ಇರುವುದನ್ನು ಇಲ್ಲವೆಂದು ನಟಿಸುವುದು, ಇಲ್ಲದನ್ನು ಇದ್ದಂತೆ ನಟಿಸುವುದಕ್ಕಿಂತಲೂ ಹೆಚ್ಚು ಕಷ್ಟ-ಇವೆರಡನ್ನೂ ಬಲ್ಲವನಿಗೆ ಮೋಸಮಾಡುವುದು ಅದೆಷ್ಟೂ ಕಷ್ಟವಲ್ಲ.

**ಮೋಸಗಾರ** ಮೋಸಗಾರನೆಂದೂ ಶ್ರೀಮಂತನಾದುದಿಲ್ಲ-ಶ್ರೀಮಂತನನ್ನು ಮೋಸಗಾರನೆಂದು ಕರೆಯುವ ಧೈರ್ಯ ಯಾವನಿಗಿದೆ? ಮೋಸಗಾರಿನಿಗೆ ಮೋಸವನ್ನು ಮಾಡಿದರೆ ದೇವನೂ ಮೆಚ್ಚುತ್ತಾನೆ, ದೆವ್ವವೂ ಮೆಚ್ಚುತ್ತದೆ.

**ಮೌನ** ಅಭ್ಯಾಸವಾದರೆ ಮಾತನಾಡಲು ಬರುತ್ತದೆ-ಅರ್ಥವಾದರೆ ಮೌನವಾಗಿರಲು ಬರುತ್ತದೆ; ಮೂಕನ ಮಾತೃಭಾಷೆಯೆ ಮೌನ; ಮೌನದಿಂದ ಆಡಲು ಸಾಧ್ಯವಿರುವಷ್ಟು ಸುಳ್ಳುಗಳನ್ನು ಮಾತಿನಿಂದ ಆಡಲು ಸಾಧ್ಯವೆ? ಹೆಂಣಗೆ ಅತಿಭೂಷಣವಾದ ಆಭರಣ ಮೌನ-ಅದನ್ನು ಧರಿಸುವ ಪುಣ್ಯಾತ್ಮಳು ಹುಟ್ಟುವ ಮುನ್ನೆಯೇ ಸತ್ತಂತಿದೆ.

**ಮಂತ್ರ** ಅರ್ಥ ಮಾಡಿಕೊಳ್ಳದೆ ಹೇಳುವುದೆಲ್ಲವೂ ಮಂತ್ರವೆ.

**ಮಂತ್ರಸಾನಿ** ದೊರೆ, ದೊರೆಸಾನಿ ಇದ್ದಂತೆ-ಮಂತ್ರಿಯ ಹೆಂಡತಿ ಅಥವ ಹೆಂಣು ಮಂತ್ರಿ.

**ಮಂತ್ರಾಲಯ** ಕಾಷಿ ಮುದ್ರೆ ಒತ್ತುವ ಮಾಧ್ವ ಮುದ್ರಣಾಲಯ.

**ಮಂತ್ರಿ** ಇವನು ಒಳಿತು ಮಾಡುವ ಮುನ್ನೆಯೆ ಇವನನ್ನು ಕೊಂಡಾಡುತ್ತಾರೆ-ಕೆಡುಕು ಮಾಡುವ ಮುನ್ನೆಯೆ ಇವನಪ್ಪನನ್ನೂ ಬೈಯುತ್ತಾರೆ.

**ಮಂಣು** ಹೊನ್ನು, ಹೆಂಣು, ಮಂಣು ಈ ಮೂರನ್ನು ತೆಗಳುವದೇ ಸರಿ- ಬೇರೇನು ಮಾಡಬೇಕು, ಇಲ್ಲದವರು? ಹೊನ್ನು ಕೊಟ್ಟು ಹೆಂಣನ್ನು ತಂದುಕೊ-ಮುಂದು ಮಂಣು ಕೊಡಲು ಬೇಡವೆ? ಅವರಿವರ ಮುಖಕ್ಕೆ ಮಂಣು ಎಸೆಯ

ಬೇಡ-ಗುರಿತಪ್ಪಿವರೆ ನಿನ್ನ ಕೈ ಹೊಲಸಾದುದೊಂದೆ ನಿಜವಾದೀತು; ಇತರರ ತಲೆಯ ಮೇಲೆ ಎರಚಲು ಮಣ್ಣು ಅಷ್ಟು ಸುಲಭವಾಗಿ ದೊರೆಯುವುದಿಲ್ಲ- ಆದಕ್ಕಾಗಿ ನಿನ್ನ ಕಾಲಡಿಯಲ್ಲಿಯೇ ಹಳ್ಳವನ್ನು ತೋಡಿಕೊಳ್ಳಬೇಕು.

**ಮಾಂಸ ಭಕ್ಷಕ** ಅಕ್ಕಿ ಗೋಧಿಯ ಕೊರತೆಯಾದಾಗ ಸರಕಾರದೊಂದಿಗೆ ಸಹಕರಿಸಿದ ಮಹಾವೀರತ್ಯಾಗಿ.

**ಮುಂದಾಳು** ಮಂದಾಳಿಗೆ ಕೋಡು ಬಂದರೆ ಅವನೇ ಮುಂದಾಳು ಆಗುತ್ತಾನೆ; ನಾಲ್ಕು ಹಿಂದಾಳು ದೊರೆತರೆ ಮಂದಾಳೇ ಮುಂದಾಳು.

**ಮುಂದುವರಿದ ರಾಜ್ಯ** ಪ್ರಾಮಾಣಿಕತೆಯಲ್ಲಿ ವಿಶ್ವಾಸವಿಡಲಾರದಷ್ಟು ಜಾಣರಾದ ರಾಜಕಾರಣಿಗಳು, ರಾಜಕಾರಣಿಗಳಲ್ಲಿ ವಿಶ್ವಾಸ ವಿಡಲಾರದಷ್ಟು ಜಾಣರಾದ ಪ್ರಜೆ ಇರುವ ರಾಜ್ಯವೇ ಮುಂದುವರಿದ ರಾಜ್ಯ-ಇದಕ್ಕೆ ನಿಸ್ಸಂಶಯವಾಗಿಯೂ ಉತ್ತಮ ಭವಿಷ್ಯವಿದೆ, ಚರಿತ್ರೆ ಅಷ್ಟು ಚೆನ್ನಾಗಿರದಿದ್ದರೂ.

**ಮುಂದೆ** ತನ್ನ ಹಿಂದಿನ ಕತೆ ಹೇಳಲು ಸುರುಮಾಡಿದವನಿಗೆ ಮುಂದೆ ಆಗಬೇಕಾದುದು ಏನೂ ಇಲ್ಲವೆಂದೇ ಅರ್ಥ.



**ಯಮಲೋಕ** ಡಾಕ್ಟರುಗಳ ಲಂಬರ ರೂಮು; ಯಮಲೋಕದ ಜನಸಂಖ್ಯೆ ಎಷ್ಟೆಂಬುದನ್ನು ನೀನು ಹೇಳು -

**ರಮ್ಯ** ರಮ್ ಕುಡಿದವನ ಕಣ್ಣಿಗೆ ಎಲ್ಲವೂ ರಮ್ಯವೇ.

**ರಸಿಕ** ಸ್ವಂತಕ್ಕೆ ಸುರದ್ರೂಪಿ ಹೆಂಡತಿ ಇದ್ದರೂ, ಇತರರ ಕುರೂಪಿ ಹೆಂಡಂದಿರಿಗೆ ಮೆಚ್ಚುವವನೇ ರಸಿಕ ; ರಸಿಕನ ಹೆಂಡತಿಗೆ ಸವತಿ ಮತ್ಸರವಿದ್ದರೆ ಬದುಕಿರುವಾಗಲೇ ಸತ್ತಿರುತ್ತಾಳೆ.

**ರಾಜ** ಪ್ರಜೆಯನ್ನು ಆಳುವವನು - ಪೋಷಿಸುವವನಲ್ಲ; ಆಟವು ಮುಗಿದ ನಂತರ ರಾಜ, ರಾಣಿ, ಜಾಕಿ, ಪುಡಿ ಎಲ್ಲವೂ ಒಂದೇ ಪ್ಯಾಕಿನ ಪ್ರಾಣಿಗಳೇ.

**ರಾಜಕಾರಣ** ರಾಜಕಾರಣವನ್ನು ಸ್ವಚ್ಛ ಮಾತ್ತೇನೆ ಎನ್ನುವವನು ಮೊದಲು ಔಡಲೆಂಣಿಯಿಂದ ಬಾಯಿ ತೊಳೆದು ಕೊಳ್ಳಬೇಕು ; ಯಾವಾಗ, ಏನನ್ನು, ಹೇಗೆ, ಎಲ್ಲಿ, ಯಾರಿಂದ, ಏಕೆ ಮಾಡಿಸಬೇಕೆಂದು ಹೇಳುವದೇ ರಾಜಕಾರಣ ; ರಾಜಕಾರಣದಲ್ಲಿ ಕಾಲಿಡುವವನಿಗೆ ಒಳ್ಳೆಯ ಭವಿಷ್ಯವಿದೆ - ರಾಜಕಾರಣದಿಂದ ಹೊರಬಿದ್ದವನಿಗೆ ಕೆಟ್ಟ ಚರಿತ್ರೆ ಇದೆ ; ಪ್ರಾಮಾಣಿಕ ರಾಜಕಾರಣಿ - ಹೇಸರಕತ್ತೆ ;

**ರಾಜಕಾರಣಿ** ಸಾಹಿತಿಯ ದೃಷ್ಟಿ ಮುಂದಿನ ಪೀಳಿಗೆಯ ಮೇಲೆ - ರಾಜಕಾರಣಿಯ ದೃಷ್ಟಿ ಮುಂದಿನ ಚುನಾವಣೆಯ ಮೇಲೆ ; ಎಲ್ಲರಿಗೂ ಕೊಂಚವಾದರೂ ಏನಾದರೂ ಮಾಡಬೇಕೆನ್ನುತ್ತಾನೆ ಸಾಹಿತಿ - ರಾಜಕಾರಣಿ ತನ್ನ ಕೊಂಚಕ್ಕಾಗಿ ಎಲ್ಲರಿಗೂ ಏನಾದರೂ ಮಾಡಿಯೇ ಬಿಡುತ್ತಾನೆ ; ತಾನು ಸೃಷ್ಟಿಸಿದ ಸುಳ್ಳುಗಳನ್ನು ಕೊನೆಗೆ ತಾನೇ ತಿಂದು ಸಾಯುತ್ತಾನೆ ರಾಜಕಾರಿಣಿ ; ಒಂದೇ ಒಂದು ಬುದ್ಧಿಮಾತಿದೆ ರಾಜಕಾರಣಿಗೆ ಹೇಳಲು - ವಿರುದ್ಧ ಪಕ್ಷದಲ್ಲಿದ್ದಾಗ ಆಡಿದುದನ್ನು

ಅಧಿಕಾರದಲ್ಲಿದ್ದಾಗ ಮಾಡಲು ಹೋಗಬೇಡ ; ರಾಜಕಾರಣಿಗಳಲ್ಲಿಯೂ ಪ್ರಾಮಾಣಿಕರಿದ್ದಾರೆ - ಸ್ವಾರ್ಥವನ್ನು ಸಾಧಿಸುವವರೆಗೂ ಒಂದೇ ಪಾರ್ಟಿಯಲ್ಲಿರುತ್ತಾರೆ ; ರಾಷ್ಟ್ರವನ್ನು ರಾಜಕಾರಣಿಯ ಕೈಯ್ಯಲ್ಲಿ, ಶಿಷ್ಯಳನ್ನು ಸ್ವಾಮಿಗಳ ಕೈಯ್ಯಲ್ಲಿ, ರೋಗಿಯನ್ನು ಡಾಕ್ಟರನ ಕೈಯ್ಯಲ್ಲಿ, ಗಂಡನನ್ನು ಹೆಂಡತಿಯ ಕೈಯ್ಯಲ್ಲಿ ಕೊಟ್ಟು ಕೂಡುವುದು ಮೂರ್ಖತನದ ಪರಮಾವಧಿ ; ರಾಜಕಾರಣಿಯನ್ನು ನಂಬಿ ಕೂಡುವ ಬದಲು, ಬೀಳುವ ಗೋಡೆಗೆ ಆತು ಕೂಡುವವನು ಹೆಚ್ಚು ಜಾಣ - ಗೋಡೆ ಆ ಕಡೆ ಬೀಳುವ ಸಂಭವವೂ ಇದೆ; ರಾಜಕಾರಣಿಯು ತನ್ನನ್ನು ತಾನು ಪ್ರೇಮಿಸುತ್ತಾನೆ, ತನ್ನನ್ನು ಪ್ರೇಮಿಸದವರನ್ನು ದ್ವೇಷಿಸುತ್ತಾನೆ - ಇದೂ ತಪ್ಪೆ, ಪಾಪ ! ರಾಜಕಾರಣಿಯು ದೇವಾಲಯಕ್ಕೆ ಬಂದರೆ ಮೋಕ್ಷವನ್ನು ಕೊಡಬಲ್ಲ ದೇವನನ್ನೂ 'ಓಟು' ಕೇಳುತ್ತಾನೆ.

**ರಾಜಸ** ರಜೆಯಲ್ಲಿ ಮಾಡುವುದೆಲ್ಲವೂ ರಾಜಸ.

**ರಾಜೀನಾಮೆ** ಗಂಡನಿಗೆ ರಾಜೀನಾಮೆ ಕೊಟ್ಟರೂ ಅವಳು ಇನ್ನೂ ಗರತಿಯೆ - ತನ್ನ ಪಾತಿವ್ರತ್ಯದ ಗುತ್ತಿಗೆಯನ್ನು ಇನ್ನೊಬ್ಬನಿಗೆ ವರ್ಗಾಯಿಸುತ್ತಾಳೆ, ಅಷ್ಟೆ !

**ರಾತ್ರಿ** ರಾ ರಾ ರಾ ; ರಾತ್ರಿಯೇ ಇದ್ದಿರದಿದ್ದರೆ ಕಳ್ಳರ ಮತ್ತು ಕವಿಗಳ ಕಾಟವು ಅದೆಷ್ಟೋ ಕಡಿಮೆಯಾಗುತ್ತಿತ್ತು.

**ರಾಮ** ಪ್ರತಿಯೊಬ್ಬ ರಾಮನಿಗೂ ನಾಲ್ಕು ಸೀತೆಯರನ್ನು ತಂದುಕೊಡಬಹುದು - ಅಷ್ಟು ರಾವಣರೊಂದು ದೊರೆಯಬೇಕಲ್ಲ ? ರಾಮನು ಆದರ್ಶ

ಪುರುಷನಾದುದು ತಂದೆಯ ಮಾತನ್ನು ನಡೆಯಿಸಿಕೊಟ್ಟುದಕ್ಕಾಗಿ - ತತ್ರಾಪಿ ಹೆಂಡತಿ ಮನೆಗೆ ಬಂದ ಮೇಲೆ !

**ರಾಮಾಯಣ** ಬೇಗನೆ ಮುಗಿಸದೆ ಬೇಸರ ತರುವ ರೀತಿಯಲ್ಲಿ ಹೇಳುವವನ ಹಾಳು ಮಾತು ; ಜೈರಗಿ ಹೇಳುವುದೆಲ್ಲವೂ ರಾಮಾಯಣವೇ.

**ರಾಕ್ಷಸ** ರಕ್ಷಿಸುವವನೇ ರಾಕ್ಷಸ - ಉದಾ : ಹೆಂಡತಿಗೆ ಗಂಡ, ಪಿಂಚಿನ ತರದ ವೃದ್ಧ ತಂದೆಗೆ ಮಗ, ಇತ್ಯಾದಿ.

**ರುಚಿ** ಕುಡುಕನೇನು ಬಲ್ಲ ಸೆರೆಯ ರುಚಿಯನ್ನು ? ರುಚಿ ರುಚಿಯಾದುದನ್ನು ಉಣಬೇಕೆನ್ನುವವನು ಅಡುಗೆಯಾಗುವವರೆಗೆ ಮಾತ್ರ ಕಾಯ್ದರೆ ಸಾಲದು - ಹಸಿವೆಯಾಗುವವರೆಗೂ ಕಾಯಬೇಕು.

**ರೂಪ** ಹೆಣ್ಣಿನ ತಪ್ಪಿಗಾಗಿ ಕೋಪ ಬಂದರೆ ಕೂಡಲೆ ಅವಳ ರೂಪವನ್ನು ಸ್ಮರಿಸಿಕೋ - ಅವಳ ತಪ್ಪಿಗಾಗಿ ನೀನೇ ಅವಳ ಕ್ಷಮಾಪಣೆಯನ್ನು ಬೇಡುತ್ತಿ.

**ರೂಪಾಯಿ** ವೇಶ್ಯಾಪುತ್ರನ ಏಕಮಾತ್ರ ಗೌರವ ಪಿತೃದೇವ.

**ರೆಕ್ಕೆ** ಪಕ್ಷಿಗಳು ಹಾರುತ್ತಿರುವುದು ರೆಕ್ಕೆಯ ಬಲದಿಂದಲ್ಲ, ಹಾರಬಲ್ಲನೆಂಬ ಆತ್ಮವಿಶ್ವಾಸದಿಂದ - ಆತ್ಮ ವಿಶ್ವಾಸವೇ ರೆಕ್ಕೆ.

**ರೆಪ್ಪೆ** ಕಣ್ಣೀರಿನ ನಲ್ಲಿ.

**ರೇಡಿಯೋ** ರೇಡಿಯೋಕ್ಕೇ ಲಾಯಿಖು.



**ರೈಟ್** 'ಹೋಲ್ಡ ಆನ್' ಗೆ ಆಪ್ಪೋಜಿಟ್.

**ರೈತ** ರೈತನಾಗುವುದು ದೊಡ್ಡ ಮಾತಲ್ಲ. ಓದಿದವನೂ ರೈತನಾಗಬಹುದು, ರೈತನಾಗಿ ಬದುಕುವುದು ಬಹು ದೊಡ್ಡ ಮಾತು.

**ರೈಲು** ರೈಲು ಮತ್ತು ಮೋಟಾರು ಸವತಿಗಳು - ಒಂದೇ ಊರಿಗೆ ಬಂದರೂ ಮಾರ್ಗಗಳು ಮಾತ್ರ ಬೇರೆ ಬೇರೆಯೇ ಬೇಕು.

**ರೈಲ್ವೆ ಗೈಡು** ಒಂದು ಬಾರಿಯೂ ತೂಕಡಿಸದೆ ಕಾದಂಬರಿಯ ನ್ನೋದುವವನು, ಆಕಳಿಸದೆ ರೈಲ್ವೆ ಗೈಡನ್ನು ಆರು ಬಾರಿ ಓದಿದರೆ ಏನಾಶ್ಚರ್ಯ ?

**ರೊಟ್ಟಿ** ರೊಟ್ಟಿಯನ್ನು ಎಲ್ಲರೂ ಪ್ರಾಮಾಣಿಕವಾಗಿಯೇ ಗಳಿಸುತ್ತಾರೆ - ಸುಳ್ಳು , ಮೋಸಗಳ ಮೊರೆ ಹೋಗ ಬೇಕಾದುದು ಮೇಲಿನ ಚಟ್ನಿಣಿಗಾಗಿ ಮಾತ್ರವೆ ; ದೇವನು ಪ್ರತ್ಯಕ್ಷನಾಗುವುದಾದರೆ, ಶಂಖ ಚಕ್ರಗಳ

ಬದಲು ರೊಟ್ಟಿಯನ್ನು ಕೈಲಿ ಹಿಡಿದು ಬಂದರೆ ಅವನಿಗೆ ಅನುಗಾಲವೂ ಹೆಚ್ಚು ಸ್ವಾಗತವಿದೆ.

**ರೋಗ** ತಪ್ಪು ಸುಖಗಳಿಗೆ ಮಾನವನು ಕೊಡಬೇಕಾದ ಕಂದಾಯ ; ಎಲ್ಲ ರೋಗಗಳೂ ಹುಟ್ಟುವುದು ಅಡುಗೆ ಮನೆಯಲ್ಲಿ, ಬೆಳೆಯುವುದು ಆಸ್ಪತ್ರೆಯಲ್ಲಿ, ಗುಣವಾಗುವುದು ಸ್ಮಶಾನದಲ್ಲಿ ; ದೇವನು ಗುಣ ಮಾಡುತ್ತಾನೆ - ಡಾಕ್ಟರು ಹಣ ಬೇಡುತ್ತಾನೆ ; ರೋಗಗಳಲ್ಲಿ ಎರಡು ಬಗೆ - ತನಗೆ ಇರುವ ರೋಗ ಮತ್ತು ಡಾಕ್ಟರನ ಔಷಧಿಯಿಂದ ಬರುವ ರೋಗ ; ದೇವನು ಮೊದಲು ಡಾಕ್ಟರುಗಳನ್ನು ಸೃಷ್ಟಿಸಿದ, ಕುಡಿದ ಅಮಲಿನಲ್ಲಿ - ಎಚ್ಚೆತ್ತ ನಂತರ ತಪ್ಪು ತಿದ್ದಿಕೊಳ್ಳಲು ರೋಗಗಳನ್ನು ನಿರ್ಮಿಸಿದ.

**ರಂಭೆ** ರಂ ಕುಡಿಯಲು ಆರಂಭಿಸುವವಳೇ ರಂಭೆ ; ಸಾಧು ಸನ್ಯಾಸಿ ಮತ್ತು ಶೀಲವಂತ ಯತಿಗಳ ಪವಿತ್ರವಾದ ಸೂಳೆ ; ಇಹದಲ್ಲಿ ತ್ಯಾಗ ಮಾಡಿದವರಿಗೆ ಪರದಲ್ಲಿ ಬಹುಮಾನವಾಗಿ ದೊರೆಯುವ ಹೆಣ್ಣು.



**ಲಗೇಜು**



**ಲಜ್ಜೆ** ಪ್ರಣಯಿಗಳ ಮಧ್ಯೆ ಲಜ್ಜೆ ಇದ್ದರೆ ಆಗ ಅವರ ಪ್ರೇಮವೂ ಒಂದು ಸುಳ್ಳು ನಾಟಕವೇ.

**ಲಜ್ಜೆಗೇಡಿ** ಗೆಜ್ಜೆ ಕಟ್ಟುವ ಲೇಡಿ.

**ಲಾಭ** ಕೊಂಚ ಕಳೆದುಕೊಳ್ಳುವುದರಲ್ಲಿಯೇ ಅನೇಕ ಬಾರಿ ಹೆಚ್ಚು ಲಾಭವಿರುತ್ತದೆ.

**ಲಿಪ್ಪನ್** ಒಂದು ಟನ್ ತೂಕ ಉಳ್ಳ ಲಿಪ್ (ತುಟಿ) ಇರುವವನು.

**ಲೇವಡಿ** ನಗುತ್ತಲೆ ರುಂಡವನ್ನು ಹಾರಿಸಬಲ್ಲ ಕಾಗದದ ಖಡ್ಗ

**ಲೇವಾದೇವಿ** ಲಾವ್ ಎನ್ನುವುದಕ್ಕಾಗಿಯೇ ಇರುವ ದೇವಿ- ಹೆಂಡತಿ.

**ಲೈಬ್ರರಿ** ಊರವರ ಬುದ್ಧಿವಂತಿಕೆಯ ಮತ್ತು ಪ್ರಾಮಾಣಿಕತೆಯ ಅಳತೆಗೋಲು ; ಕಳೆದು ಹೋದ ಪುಸ್ತಕಗಳು ಕಳ್ಳರ ಕತೆ ಹೇಳುತ್ತವೆ ; ಉಳಿದವು ದಡ್ಡರ ಕತೆ ಹೇಳುತ್ತವೆ ; ಸಾಹಿತಿಯ, ಮುದ್ರಕನ, ಪ್ರಕಾಶಕನ, ಮಾರಾಟಗಾರನ ಪರಮಶತ್ರು.

**ಲೋಪ** ಬಹುಜನರಲ್ಲಿಯ ಬಹು ದೊಡ್ಡ ಲೋಪವು ಒಂದೇ - ಚಿಕ್ಕಪುಟ್ಟ ಲೋಪಗಳಿಲ್ಲದಿರುವುದು.

**ಲಂಗೋಟ** ಸನ್ಯಾಸಿ ಚಿಕ್ಕವನಿದ್ದಷ್ಟೂ ಲಂಗೋಟಿ ದೊಡ್ಡದಿರಬೇಕು. ನಿದ್ರಿಸುವವನು ಎದ್ದಿರುವವನ ಲಂಗೋಟಿಯನ್ನು ಕದಿಯಬಾರದು.

**ಲಂಚ** ಮಂಚಕ್ಕೆ ನಿದ್ರೆ ಇಲ್ಲ - ಲಂಚಕ್ಕೆ ಸಾವಿಲ್ಲ ; ಲಂಚವು ವ್ಯಭಿಚಾರವಿದ್ದಂತೆ - ಇಬ್ಬರು ಬೇಕೇ ಬೇಕು ಈ ಮಹತ್ಕಾರ್ಯವು ಜರುಗಲು ; ಲಂಚವನ್ನು ಕೊಡುವವರೂ, ಕೊಂಡವರೂ ಕೂಡ ಸತ್ತರೂ ಲಂಚವು ಇನ್ನೂ ಬದುಕಿಯೇ ಇರುತ್ತದೆ ; ಲಂಚದ ಹುಟ್ಟು ದೇವನ ಗುಡಿಯಲ್ಲಿ-ತೆಂಗಿನಕಾಯಿಯಿಂದ ಆರಂಭ.. ?

**ಲಾಂಛನಾಸ್ಪದ** ಲಂಚಾಸ್ಪದದ ತದ್ಭವ.

**ಲಿಂಗಾಂಗಿ** ಸಂತಾನ ನಿರೋಧಧ ಒಂದು ಸಾಮಾನ್ಯ ಉಪಕರಣ.



**ವ್ಯಕ್ತಿ** ವ್ಯಕ್ತಿತ್ವವಿಲ್ಲದ ವ್ಯಕ್ತಿ ಸಿಹಿಯನ್ನು ಕಳೆದುಕೊಂಡ
ಸಕ್ಕರಿಗೆ ಸಮಾನ.

**ವಕೀಲ** ವಕೀಲನಿಗೆ ಸತ್ಯವನ್ನಾಡಲು ಸಾಧ್ಯವಿದ್ದಿದ್ದರೆ
ಹರಿಶ್ಚಂದ್ರನೂ ಒಬ್ಬ ದೊಡ್ಡ ವಕೀಲನಸ್ನು
ತರಬಹುದಿತ್ತು. ತನ್ನ ಶಬ್ದ ಸಂಪತ್ತನ್ನು ಬಾಡಿಗೆಗೆ
ಕೊಡುವವ ಮಾತಿನ ಸಾಹುಕಾರ ; ಇಬ್ಬರು
ವಕೀಲರು ಸೇರಿದರೆ, ಒಂದು ಕತ್ತರಿಯಾಗುತ್ತದೆ
ದಯವಿಟ್ಟು ಮಧ್ಯೆ ಸಿಕ್ಕು ನೋಡಿ ; ವಕೀಲನು
ತಪ್ಪದೆಸತ್ಯವನ್ನು ತಿಳಿಯುತ್ತಾನೆ. - ಸಾಧ್ಯವಿದ್ದಷ್ಟು
ಅದರಿಂದ ದೂರವಿರಲು ; ಭೂಲೋಕದಲ್ಲಿ
ಪಾಪವು ಜಾಸ್ತಿಯಾದರೆ, ದೇವನು ನೂರು
ಮಾಸ್ತರನ್ನು ಕಳಿಸುತ್ತಾನೆ - ಪುಣ್ಯವು ಜಾಸ್ತಿಯಾದರೆ
ಒಬ್ಬ ವಕೀಲನನ್ನು ಕಳಿಸುತ್ತಾನೆ ; ವಕೀಲನ ಮ
ಗೋಡೆ ಕಟ್ಟಿರುವುದು ಕಲ್ಲು ಇಟ್ಟಿಗೆಗಳಿಂದಲ್ಲ
ಮೂರ್ಖರ ಖಾಲಿ ತಲೆ ಬುರುಡೆಗಳಿಂದ
ನ್ಯಾಯಾನ್ಯಾಯ ಸತ್ಯಾಸತ್ಯಗಳಿಗೂ ವಕೀಲನಿಗೂ
ಇರುವ ಸಂಬಂಧವು ಗೋಕುಲಾಷ್ಟಮಿಗೂ
ಇಮಾಂಸಾಬಿಗೂ ಇರುವಷ್ಟೆ - ತನ್ನ ಕಕ್ಷಿದಾರ
ಸುಳ್ಳುಗಳೊಂದಿಗಷ್ಟೇ ವಕೀಲನ ಸಂಬಂಧ ?

**ವಚನ** ಕೊಟ್ಟ ವಚನಕ್ಕೆ ತಪ್ಪಿದನೆಂಬ ಅಪವಾದಕ್ಕೆ ಗು
ಯಾಗಬೇಡ - ಕೂಡಲೆ ಕೊಡು, ಇನ್ನೊಂದನ್ನು
ಚುನಾವಣೆಯಲ್ಲಿ, ಶಯ್ಯಾಗೃಹದಲ್ಲಿ ಕೊ
ವಚನವನ್ನು ಮುರಿಯದವನೇ ಮೂರ್ಖ.

**ವಜ್ರ** ನಗುವ ಇದ್ದಲು ವಜ್ರವೆನಿಸಿಕೊಳ್ಳುತ್ತದೆ - ಅಳುವ ವಜ್ರ ಇದ್ದಲೇ ಆಗುತ್ತದೆ.

**ವರ್ತಿಸು** ಅವರಿವರು ನಿನ್ನಿಚ್ಛೆಯಂತೆ ವರ್ತಿಸಲಿಲ್ಲವೆಂದೇಕೆ ಕೋಪ ?, ನಿನ್ನಿಚ್ಛೆಯಂತೆ ವರ್ತಿಸಲು ನಿನಗಾದರೂ ಆಗಿದೆಯೇ ?

**ವ್ಯಭಿಚಾರಿ** ನಕೂಪಸ್ಥ ಮಂಡೂಕ ; ಮಹಾತ್ಯಾಗಿ, ತನ್ನ ದೇಹ ವನ್ನೇ ಆಹುತಿಯಾಗಿ ಕೊಡುತ್ತಾನೆ ಪಾಪಕ್ಕಾಗಿ !

**ವಯಸ್ಸು** ಬೇರಾವುದು ಇಲ್ಲದವನು ಜಾತಿಯನ್ನೋ, ವಯಸ್ಸನ್ನೋ ಮುಂದು ಮಾಡುತ್ತಾನೆ ; ಬದುಕಿರುವ ಎಲ್ಲರಿಗೂ ವಯಸ್ಸು ಬರುತ್ತದೆ - ಬುದ್ಧಿ ? ಹೆಂಣು ತನ್ನ ವಯಸ್ಸನ್ನು ಹತ್ತು ವರ್ಷಗಳು ಕಡಿಮೆ ಮಾಡಿ ಹೇಳುತ್ತದೆಂಬುದು ಅಪರಾಧವಲ್ಲ - ಇತರ ಹೆಣ್ಣುಗಳ ವಯಸ್ಸನ್ನು ಇಪ್ಪತ್ತು ಹೆಚ್ಚು ಮಾಡಿ ಹೇಳುತ್ತದೆ.

**ವರದಕ್ಷಿಣೆ** ವರದಕ್ಷಿಣೆ ವರ್ಷವಲ್ಲಿಯೇ ಹೋಯಿತು, ಅದರ ಹಿಂದೆ ಬಂದ ಹೆಂಣು ಉಳಿದೇಬಿಟ್ಟಿತು - ಯಾವ ದುರ್ದೈವಕ್ಕಾಗಿ ಅಳಬೇಕು ? ಹೆಂಡತಿಯನ್ನು ಪ್ರೀತಿ ಸುವವನು ದರಿದ್ರನಾಗುತ್ತಾನೆ - ವರದಕ್ಷಿಣೆಯನ್ನು ಪ್ರೀತಿಸುವವನು ಶ್ರೀಮಂತನಾಗುತ್ತಾನೆ.

**ವರ್ತಮಾನ ಪತ್ರ** ವರ್ತಕರು ಕೊಳ್ಳುವ ಮಾನಪತ್ರ.

**ವಾಕ್ಪಟುತ್ವ** ಅರ್ಧ ಚಮಚೆ ಬುದ್ಧಿ, ಆರು ತಂಬಿಗೆ ನೀರು.

**ವಾಕ್ ಸ್ವಾತಂತ್ರ್ಯ** ಇದನ್ನು ಮೂರ್ಖನಿಗೆ ಮೊದಲು ಕೊಡಬೇಕು ತಾನಾರು ಎಂಬುವನ್ನು ತಕ್ಷಣವೇ ತೋರಿಸುತ್ತಾನೆ.

**ವಾದ** ಹೆಂಡತಿಯೊಡನೆ ವಾದ ಬೇಡ - ಹೇಳಿದುದೆಲ್ಲವನ್ನೂ ನಂಬದಿದ್ದರಾಯಿತು ; ಊಟಕ್ಕೆ ಕುಳಿತಾಗ ವಾದ ಹೂಡಿದರೆ ಹಸಿದವನೇ ಸೋಲುತ್ತಾನೆ.

**ವ್ಯಾಪಾರ** ವ್ಯಾಪಾರದಲ್ಲಿ ಮೋಸವಿದೆ ಎನ್ನುವ ದಡ್ಡರೂ ಇದ್ದಾರೆ.

**ವ್ಯಾಯಾಮ** ಊಟದ ನಂತರ ಗಂಟೆ ಹೊತ್ತು ನಿದ್ರಿಸುವುದು ಗಂಡನಿಗೆ ವ್ಯಾಯಾಮ, ಎರಡು ಗಂಟೆ ಮಾತನಾಡುವುದು ಹೆಂಡತಿಗೆ ವ್ಯಾಯಮ - ಗಂಡನ ಆರೋಗ್ಯವನ್ನು ಯಾವ ದೇವನು ಕಾಪಾಡಬೇಕು ?

**ವಾಸನೆ** ಒಳ್ಳೆಯ ವಸ್ತುಗಳಿಗೆಲ್ಲ ಕೆಟ್ಟ ವಾಸನೆ ಇರುವುದೇ ಹೆಚ್ಚು - ಉದಾ : ಬೆಳ್ಳುಳ್ಳಿ, ಹಿಂಗು, ಈರುಳ್ಳಿ, ಗುರುಗಳ ಬಾಯಿ, ಇತ್ಯಾದಿ ಇತ್ಯಾದಿ.

**ವ್ಯಾಸಪೀಠ** ಸ್ತನಯೋರುಭಯೋರ್ಮಧ್ಯೆ.

**ವಿಚಿತ್ರ** ಮನುಷ್ಯನೊಂದು ವಿಚಿತ್ರ ಪ್ರಾಣಿ - ಮಲಗಿದ ನಂತರ ಏಳಬೇಕೆನ್ನುತ್ತಾನೆ, ಎದ್ದನಂತರ ಮಲಗಬೇಕೆನ್ನುತ್ತಾನೆ.

**ವಿಜ್ಞಾನಿ** ಸಮುದ್ರದಲ್ಲಿ ನೀರಿದೆ ಎನ್ನುವವನು ಸಾಮಾನ್ಯ ಜ್ಞಾನಿ - ನೀರಿನ ಅಡಿಯಲ್ಲಿ ಭೂಮಿ ಇದೆ ಎನ್ನುವವನು ವಿಜ್ಞಾನಿ.

**ವಿದ್ಯಾರ್ಥಿ** ಸಂಪಂ ವಿದ್ಯಾರ್ಥಿ ಲಕ್ಷಣಂ. ವಿದ್ಯಾರ್ಥಿಗಳಕ್ಕಿಂತಲೂ ಪಾಸಾರ್ಥಿಗಳೇ ಹೆಚ್ಚು.

**ವಿದ್ಯೆ** ಬುದ್ಧಿ ಇಲ್ಲದವನಿಗೆ ವಿದ್ಯೆಯೇ ಗತಿ ; ಹೆಂಡ ಕುಡಿಯ ಬಹುದಾದವನನ್ನು ಬ್ರಾಂದಿ ಸೇವಿಸಬಹುದಾದ

ವನಸ್ನಾಗಿ ಮಾಡುವುದೇ ವಿದ್ಯೆ ; ವಿದ್ಯೆಯಿಂದ ಒಂದೇ ಉಪಯೋಗ - ಅವಿದ್ಯಾವಂತರನ್ನು ಹೀನವಾಗಿ ಕಾಣಲು ಪ್ರೇರೇಪಿಸುತ್ತದೆ ; ವಿದ್ಯಾವಂತನಿಗೂ ಅವಿದ್ಯಾವಂತನಿಗೂ ಹೆಚ್ಚು ಭೇದವಿಲ್ಲ - ಬದುಕಿರುವವನಿಗೂ ಸತ್ತಿರುವವನಿಗೂ ಇರುವಷ್ಟೇ ; ಜಾಣನನ್ನು ಹೆಚ್ಚು ಜಾಣನಾಗಿಯೂ, ಮೂರ್ಖನನ್ನು ಕಡಿಮೆ ಮೂರ್ಖನನ್ನಾಗಿಯೂ ಮಾಡುವ ಮಹಾಮಂತ್ರ.

**ವಿಧವೆ** ಮಾಳಿಗೆ ಇಲ್ಲದ ಮನೆ; ರೆಪ್ಪೆ ಇಲ್ಲದ ಕಣ್ಣು; ವಿಧವೆ ಬೆನ್ನು ಇದ್ದಂತೆ - ತನ್ನ ಬೆನ್ನು, ತನ್ನ ವಿಧವೆ ತನಗೆ ಕಾಣುವುದಿಲ್ಲ ; ವಿಧವೆಯರಲ್ಲಿ ಎರಡು ಬಗೆ - ವಿಧವೆಯಾಗುವ ಮುನ್ನ ಸುಖ ಪಟ್ಟವರು - ಆದನಂತರವೇ ಸುಖಪಡುವವರು ; ಶ್ರೀಮಂತ ವಿಧವೆ ಒಂದೇ ಕಣ್ಣಿಂದ ಅಳುತ್ತಾಳೆ - ಇನ್ನೊಂದು ಕಣ್ಣಿಂದ ನಗುತ್ತಾಳೆ ; ಒಂದು ಒಣಗಿದ ಕಟ್ಟಿಗೆಗೆ ವೈಧವ್ಯ ಬಂದರೆ, ಮೂರೇ ದಿನಗಳಲ್ಲಿ ಅದು ವಿಪರೀತ ದಪ್ಪವಾಗುತ್ತದೆ. ಶ್ರೀಮಂತ ವಿಧವೆಯ ಕಣ್ಣೀರು ಹೊರಬರುವ ಮುನ್ನವೇ ಒಣಗುತ್ತದೆ. ವಿಧವೆಯನ್ನು ಲಗ್ನವಾಗುವುದು ತಣ್ಣನ ಕಾಫಿ ಕುಡಿದಂತೆ ; ಎರಡು ಮಕ್ಕಳಿರುವ ವಿಧವೆಯನ್ನು ಲಗ್ನವಾಗುವವನ ಮನೆಗೆ ಮೂರು ಹಿತ್ತಲುಬಾಗಿಲು ಗಳು ; ಅವಳ ಶೋಕವು ತಣ್ಣಗಾಗುವ ಒಳಗಾಗಿಯೇ ವಿಧವೆಯನ್ನು ಲಗ್ನವಾಗಬೇಕು - ಲಗ್ನವಾಗುವವ ರೆಗೂ ಅವಳ ಶೋಕವು ತಣ್ಣಗಾಗುವುದಿಲ್ಲ ; ವಿಧವೆ ಶ್ರೀಮಂತಳಾಗಿದ್ದರೆ ಅವಳನ್ನು ಮೃತಪತಿಯ ಚಿತೆಯಲ್ಲಿಯೇ ಬೇಯಿಸು - ಇಲ್ಲವೇ ಕೂಡಲೆ ಮದುವೆ ಮಾಡು ; ಎಷ್ಟು ಕಾಲ ಬದುಕಿದರೂ

ಕೆಲವರು ಗಂಡಂದಿರು ಇನ್ನೂ ಸಾಯಲೊಲ್ಲರು - ತನ್ನ ವಿಧವೆಯನ್ನು ತಾನೇ ನೋಡಬೇಕೆಂಬಾಶೆಯೇ ?

**ವಿಧೇಯತೆ** ಎಲ್ಲ ಬೀಗಗಳನ್ನು ತೆರೆಯಬಲ್ಲ ಮಾಸ್ಟರ್ ಕೀ.

**ವಿನಯ** ಬುದ್ಧಿವಂತಿಕೆಯಿಂದ ಗರ್ವವು ಬರುತ್ತದೆ. ತಿಳುವಳಿಕೆ ವಿವೇಕವನ್ನು ತರುತ್ತದೆ.

**ವಿಭೂತಿ** ಮನೋವಿಕಾರ ಹೊಂದಿದ ಭೂತ ಅರ್ಥಾತ್ ಹುಟ್ಟುತ್ತಲೇ ಬ್ರಾಹ್ಮಣನನ್ನು ದ್ವೇಷಿಸುವ ಮೂರ್ಖ ವೀರಶೈವ ; ಮುದ್ರಾರಾಕ್ಷಸ ನೋಡಿರಿ.

**ವಿಮರ್ಶಕ** ಅಪಕ್ವ ಸಾಹಿತಿ, ಇಲ್ಲವೆ ಹಳಸಿದ ಸಾಹಿತಿ. ಅವರಿವರ ಮಕ್ಕಳನ್ನು ಕಂಡು ಮೂಗು ಮುರಿಯುವ ಬಂಜೆ ; ಸಾಹಿತ್ಯ ವಿಧವಾ ; ಕಾರ್ಡು ಬರೆಯಲು ಬಾರದವನು ಕಾವ್ಯದ ವಿಮರ್ಶೆ ಮಾಡುತ್ತಾನೆ. ಭಾವಮೈದುನನಂತೆ ಹೊಗಳುತ್ತಾನೆ, ಇಲ್ಲವೇ ಸವತಿಯಂತೆ ತೆಗಳುತ್ತಾನೆ ; ಹೊಸ ಜೋಡು, ಹುಚ್ಚು ನಾಯಿ, ಪೊಲಸು ವಿಮರ್ಶಕ - ಇವು ಮೂರನ್ನು ತಿರುಗಿ ಕಚ್ಚಬೇಡ.

**ವಿಮರ್ಶೆ** ನನ್ನ ಗ್ರಂಥವನ್ನು ವಿಮರ್ಶೆ ಮಾಡು ಎಂದರೆ ನನ್ನನ್ನು ಕೊಂಡಾಡು - ವಿಮರ್ಶೆ ಮಾಡಬೇಡ ಎಂದರೆ, ನನ್ನನ್ನು ಬೈಯ್ಯಬೇಡ.

**ವಿಮಾ ಏಜೆಂಟ್** ಪರ ಪತ್ನೀ ಹಿತೈಷಿ ; ನಿನ್ನ ನಂತರವೇ ನಿನ್ನ ಮಡದಿಗೆ ಸುಖ ಎಂದು ಸೂಚ್ಯವಾಗಿ ಸತ್ಯವನ್ನೇ ಹೇಳುವವ.

**ವಿಮೆ** ಬಡವನಾಗಿ ಬಾಳಿ, ಸತ್ತು ಧನಿಕನಾಗಲು ಏಕಮಾತ್ರ ಉಪಾಯ.

**ವಿರಕ್ತ** ರಕ್ತ ವಿಹೀನಃ ವಿರಕ್ತಃ, ನಂಬಿ ಬಂದ ತಿಗಣೆಗಳನ್ನು ಆಹಾರ ಕೊಡದೆ ಕೊಲ್ಲುವವನು.

**ವಿರಹ** ಪ್ರೇಮಕ್ಕೆ ವಿರಹವು, ಬೆಂಕಿಗೆ ಗಾಳಿ ಇದ್ದಂತೆ - ಚಿಕ್ಕದನ್ನು ಕೊಲ್ಲುತ್ತದೆ, ದೊಡ್ಡದನ್ನು ಪ್ರಜ್ವಲಿಸುತ್ತದೆ.

**ವಿರಾಮ** ವಿರಾಮವಿದ್ದಾಗಲೇ ಕೆಲಸ ಮಾಡು - ಕೆಲಸವಿದ್ದಾಗ ಕೆಲಸ ಮಾಡಲು ವಿರಾಮವು ಅಡ್ಡಬರುತ್ತದೆ.

**ವಿವಾಹ** ಪ್ರೇಮವಿಲ್ಲದ ವಿವಾಹಗಳಿರುವ ಸಮಾಜದಲ್ಲಿ ವಿವಾಹಗಳಿಲ್ಲದ ಪ್ರೇಮವೂ ಇರುತ್ತದೆ. ದ್ವಿಪತ್ನೀ ವಿವಾಹವು ಅಪರಾಧವಾದಂದಿನಿಂದ ಪುರುಷ ವರ್ಗದಲ್ಲಿ ಆತ್ಮಹತ್ಯದ ಘಟನೆಗಳೇ ಇಲ್ಲದಂತಾಗಿವೆಯಂತೆ.

**ವಿವೇಕಿ** ವಿವೇಕಿಯೂ ಮತ್ತು ಪ್ರಣಯಿಯೂ ಒಂದೇ ಸಮಯದಲ್ಲಿ ಆಗಿರಲೂ ದೇವನಿಗೂ ಸಾಧ್ಯವಿಲ್ಲ ; ಹೆಂಣು ಗಂಡಿಗಿಂತಲೂ ಹೆಚ್ಚು ವಿವೇಕಿ - ಹೆಂಣು ಕಲಿತುದುದು ಕಡಿಮೆಯಾದುದರಿಂದ ತಿಳಿದುದು ಹೆಚ್ಚು ; ವಿವೇಕಿಯ ನಾಲಗೆ ಹೃದಯದಲ್ಲಿದೆ - ಅವಿವೇಕಿಯ ಹೃದಯವು ನಾಲಗೆಯಲ್ಲಿದೆ.

**ವಿಶ್ವವಿದ್ಯಾಲಯ** ವೈವಿಧ್ಯತೆಯುಳ್ಳ ಮಾನವತೆಯನ್ನು ಒಂದೇ ಪಡಿಯಚ್ಚಿನಲ್ಲಿ ತಯಾರಿಸಲು ಯತ್ನಿಸುವ ಮಹಾಮಶೀನು ; ಬುದ್ಧಿ ಇದ್ದವನಿಗೆ ವಿದ್ಯೆಯನ್ನು ವಿಕ್ರಯ ಮಾಡುವ ವೈಶ್ಯವಿದ್ಯಾಲಯ ; ವಿಶ್ವವಿದ್ಯಾಲಯಗಳಿಂದಲೇ ಇಂದು ನಮ್ಮ ಸಂಸ್ಕೃತಿ ಉಳಿದಿದೆ - ಅಹುದು ಬಾಲದಿಂದಲೆ ನಾಯಿ ಉಳಿದಿದೆ ; ವಿಶ್ವವಿದ್ಯಾಲಯವು ಜ್ಞಾನದ ತವರುಮನೆ - ಅಲ್ಲವೇ ಮತ್ತೆ? ಅನೇಕ ವಿದ್ಯಾರ್ಥಿಗಳಿಗೆ ಈ ತವರುಮನೆಯಿಂದ ಹೊರಬರುವುದೇ ಕಷ್ಟವೆನಿಸುತ್ತದೆ.

**ವಿಶ್ವಾಸ** ಒಬ್ಬನನ್ನು ವಿಶ್ವಾಸಕ್ಕೆ ಅರ್ಹನನ್ನಾಗಿ ಮಾಡಬೇಕಾದರೆ, ಅವನಲ್ಲಿ ವಿಶ್ವಾಸವನ್ನಿಡು - ಅನರ್ಹನನ್ನಾಗಿ ಮಾಡಬೇಕಾದರೆ ಅನುಮಾನವನ್ನು ಸೂಚಿಸು ; ದೇವನಲ್ಲಿ ವಿಶ್ವಾಸವಿಲ್ಲದವನು ಬದುಕಿದಂತೆಯೇ ಅಲ್ಲ, ಗೆಳೆಯನಲ್ಲಿ ವಿಶ್ವಾಸವಿಲ್ಲದವನು ಸತ್ತಂತೆಯೇ ಸರಿ, ಆತ್ಮವಿಶ್ವಾಸವಿಲ್ಲದವನು ಬದುಕಿದ್ದರೇನು ಸತ್ತಿದ್ದರೇನು ? ಹೆಂಣಿನಲ್ಲಿ ವಿಶ್ವಾಸ ಬಯಸುವ ಜಾಣನು, ಕಾಗದದ ಹೂ ಮೂಸುವವನನ್ನು ಕಂಡೇಕೆ ನಗಬೇಕು ?

**ವಿಶ್ರಾಂತಿ** ದಣಿವುನಿಂದ ವಿಶ್ರಾಂತಿ ದೊರೆಯಬೇಕು - ವಿಶ್ರಾಂತಿಯಿಂದಲೇ ದಣಿವು ಆಗಬಾರದು ; ವಿಶ್ರಾಂತಿ ಆಹಾರವಾಗಬಾರದು, ಔಷಧಿಯಾಗಬೇಕು; ಸೋಮಾರಿತನವು ಸುಲಭ ಕೆಲಸವಲ್ಲ - ಬೇಸರವಾದಾಗ ಅದನ್ನು ನಿಲ್ಲಿಸಿ ವಿಶ್ರಾಂತಿ ತೆಗೆದುಕೊಳ್ಳುವಂತಿಲ್ಲ. !

**ವಿಷ** ವಿಷದಲ್ಲಿ ಎರಡೂ ಶಕ್ತಿಗಳಿವೆ, ಪ್ರಾಣವನ್ನು ಉಳಿಸಬಲ್ಲದು, ತೆಗೆಯಬಲ್ಲದು - ಕುಡಿದರೆ ಪ್ರಾಣವು ಹೋಗುತ್ತದೆ, ಬಿಟ್ಟರೆ ಉಳಿಯುತ್ತದೆ ; ಹುಚ್ಚುನಾಯಿ, ಗಂಡ ಹೆಂಡತಿ, ಇಬ್ಬರನ್ನು ಕಚ್ಚಿತು. ಗಂಡ ಸತ್ತ, ನಾಯಿಯೂ ಸತ್ತಿತ್ತು. ಯಾರ ವಿಷ ಹೆಚ್ಚು ? ವಿಷವನ್ನು ಹಾಕಿದರೆ ತಿಂದವನು ಮಾತ್ರವೇ ಸಾಯುತ್ತಾನೆ - ಚುನಾವಣೆಯಲ್ಲಿ ಇಳಿಸಿದರೆ ಅವನ ವಂಶವೇ ಸಾಯುತ್ತದೆ, ಸೋತರೆ ಬಡತನದಿಂದ, ಗೆದ್ದರೆ ಅಧಿಕಾರ ಮದದಿಂದ.

**ವೃತ್ತಿ** ಕೆಟ್ಟ ವೃತ್ತಿ ಎಂಬುದಿಲ್ಲ - ಕೆಟ್ಟ ಪ್ರವೃತ್ತಿಯವರು ಮಾತ್ರವೇ ಇದ್ದಾರೆ ; ಮಗನಿಗೆ ಯಾವ ವೃತ್ತಿಯನ್ನೂ ಕಲಿಸದವನು ತಪ್ಪದೆ ಕಳ್ಳನ

ತಂದೆಯಾಗುತ್ತಾನೆ. ಮನೋವೃತ್ತಿಗೆ ತಕ್ಕ ವೃತ್ತಿ ದೊರೆತವನು ಪುಣ್ಯಶಾಲಿ - ವೃತ್ತಿಗೆ ತಕ್ಕ ಮನೋವೃತ್ತಿ ಬೆಳೆಸಿದವನು ಪ್ರಭಾವಶಾಲಿ.

**ವೃದ್ಧಾಪ್ಯ** ನಲವತ್ತು ಪ್ರಾಯದ ವೃದ್ಧಾಪ್ಯ - ಐವತ್ತು ವೃದ್ಧಾಪ್ಯದ ಪ್ರಾಯ.

**ವೇದ** ವೇದಕ್ಕಿಂತಲೂ ವಾದದಲ್ಲಿಯೇ ಅನೇಕರಿಗೆ ಹೆಚ್ಚು ಆಸಕ್ತಿ.

**ವೇಶ್ಯೆ** ವಿಶ್ವದ ಸತಿಯೇ ವೇಶ್ಯೆ ; ನಗದು ಹೆಂಡತಿ ; ಮದುವೆಯ ಮಾರ್ಕೆಟ್ಟಿನಲ್ಲಿ ಮಾರಾಟಕ್ಕೆ ಹೋಗದೆ ಬಾಡಿಗೆ ಉಳಿದಿರುವ ಹೆಂಣು ಪ್ರಾಣಿ ; ಅನೇಕ ಗರತಿಯರ ಮಾನವನ್ನು ಉಳಿಸಿಕೊಡುವ ಮಹಾತಾಯಿ.

**ವೇಳಾಪತ್ರಿಕೆ** ನಿತ್ಯವೂ ನಾಲ್ಕಾರುಬಾರಿ ಸುಳ್ಳು ಬೊಗಳುವ ಗ್ರಂಥ, ಉದಾ : ರೈಲ್ವೇ ವೇಳಾಪತ್ರಿಕೆ.

**ವೇಳೆ** ವೇಳೆಗೆ ಸರಿಯಾಗಿ ಬರುವವನು ಒಬ್ಬನೇ - ಬೇರಾವ ಕೆಲಸವೂ ಇಲ್ಲದೆ ವೇಳೆಗೆ ಸರಿಯಾಗಿ ಬರುವುದೊಂದನ್ನೇ ಕೆಲಸವಾಗಿ ಇಟ್ಟುಕೊಂಡವನು.

**ವೈರಿ** ಮಂತ್ರಿಯ ವೈರಿ ಪ್ರತಿಪಕ್ಷದಲ್ಲಿ - ಮನೆಯಲ್ಲಿಯೇ ಇರುತ್ತಾನೆ ಭಾವಮೈದುನನಾಗಿ.

**ಚಿತ್ರಕಾರ** ಕಲಾಮಾತೆಯ ಮೊದಲ ಮಲಮಗ.

**ವಂಚಕ** ವಂಚಕರಲ್ಲಿಯೂ ಪ್ರಾಮಾಣಿಕ ವಂಚಕರಿದ್ದಾರೆ - ನಟ, ಅವನು ನಾಟಕವೆಂದು ಹೇಳಿ ನಾಟಕವನ್ನಾಡುತ್ತಾನೆ.



**ಶಕ್ತಿ** ಹೆಂಣು ಶಕ್ತಿಯನ್ನು ಗಂಡಿನಿಂದಲೆ ಪಡೆಯುತ್ತದೆ. ಗಂಡಿನ ಮೇಲೆಯೇ ಪ್ರಯೋಗಿಸಲು.

**ಶಕುಂತಲೆ** ಗವರ್ನಮೆಂಟ್ ಗರ್ಲ ; ದೂರ್ವಾಸನ ಶಾಪದಿಂದ ಗರ್ಭವತಿಯಾಗಿದ್ದ ಶಕುಂತಲೆಗೆ, ನಾನಾ ಸಂಕಷ್ಟಗಳು ಒದಗಿದವು ಎಂದೊಬ್ಬರ ಹೇಳಿಕೆ.

**ಶತ್ರು** ಸಾವಿರ ಗೆಳೆಯರಿದ್ದರೂ ಕರೆದಾಗ ಒಬ್ಬನೂ ಬರುವುದಿಲ್ಲ - ಶತ್ರು ಒಬ್ಬನೇ ಇದ್ದರೂ ಕರೆಯದಲೇ ಬರುತ್ತಾನೆ ; ನಿನಗೊಬ್ಬ ಶತ್ರು ಬೇಕೇನು ? ಯಾವನಿಗಾದರೂ ಎರಡು ಬಾರಿ ಹಣವನ್ನು ಕೊಟ್ಟು ಒಂದೇ ಬಾರಿ ಕೇಳು ; ಸೋತು ಹೋದ ಶತ್ರುವಿಗಿಂತಲೂ ಸತ್ತು ಹೋದ ಶತ್ರುವೇ ಹೆಚ್ಚು ಸಾಧು.

**ಶ್ರಮ** ನಮಗೆ ಹೆಚ್ಚು ಶ್ರಮವಾಗುವುದು ಮಾಡಿದ ಕೆಲಸದಿಂದಲ್ಲ - ಮಾಡದಿರುವ ಕೆಲಸದಿಂದ.

**ಶಾಖಾಹಾರಿ** ಬಿಸಿ ಆಹಾರವನ್ನು ತಿನ್ನುವವನು.

**ಶ್ರಾದ್ಧ** ಸತ್ತವನು ಬದುಕಿದವರಿಂದ ವರ್ಷಕ್ಕೊಮ್ಮೆ ರಶೀದು ಕೊಡದೆ ವಸೂಲು ಮಾಡಿಕೊಳ್ಳುವ ಕಂದಾಯ.

**ಶಾನುಭೋಗ** ಒಬ್ಬ ಶಾನುಭೋಗನಿಗೆ ಯಾವನಾದರೂ ಮೋಸ ಮಾಡಿದನೆಂದರೆ ಅವನು ಇನ್ನೊಬ್ಬ ಶಾನುಭೋಗನೇ ಇರಬೇಕು.

**ಶಾಪ** ಮೆರವಣಿಗೆ ಇದ್ದಂತೆ - ಎಲ್ಲಿಂದ ಹೊರಡುತ್ತದೊ ಮರಳಿ ಅಲ್ಲಿಗೇ ಬಂದು ನಿಲ್ಲುತ್ತದೆ.

**ಶಾಲೆ** ಶಾಲೆಯಲ್ಲಿ ಇಂದೊಬ್ಬನಿಗೆ ಸ್ಥಳವನ್ನು ಕೊಡು, ನಾಳೆ ಅವನು ಎಲ್ಲಿಯಾದರೂ ಸ್ಥಳವನ್ನು ದೊರಕಿಸಿಕೊಳ್ಳುತ್ತಾನೆ - ಶಾಲೆಯಲ್ಲಿ ಇಂದೊಬ್ಬನಿಗೆ ಸ್ಥಳ ಇಲ್ಲ ಎನ್ನು, ನಾಳೆಗಾಗಿ ಜೇಲಿನಲ್ಲಿ ಅವನಿಗೆ ಸ್ಥಳವನ್ನು ಕಾಯ್ದಿರಿಸು.

**ಶಾಶ್ವತ** ತಾತ್ಕಾಲಿಕ ಸುಖವೇ ಶಾಶ್ವತ ದುಃಖಕ್ಕೆ ಕಾರಣ ತಾತ್ಕಾಲಿಕ ದುಃಖವು ಶಾಶ್ವತ ಸುಖಕ್ಕೆ ಕಾರಣವಲ್ಲ.

**ಶಿರಸಾಮಾನ್ಯ** ಸಾಮಾನ್ಯ ಶಿರ.

**ಶಿಷ್ಟಸಂಪ್ರದಾಯ** ಮೂರ್ಖರನ್ನು ದೂರಪಿಡಲು ಜಾಣರು ಮಾಡಿರುವ ಉಪಾಯ.

**ಶಿಸ್ತು** ಅನೇಕರು ಸಾಕಿದ ನಾಯಿಗಳಿಗೆ ಶಿಸ್ತು ಕಲಿಸುವುದುಂಟು, ಹೆತ್ತ ಮಕ್ಕಳಿಗಲ್ಲ - ಸಾಧ್ಯವಾದುದಷ್ಟನ್ನೂ ಮಾಡುತ್ತಾರೆ ; ಸಾವಿರಾರು ಜನರಿಗೆ ಎರಡೇ ದಿನಗಳಲ್ಲಿ ಶಿಸ್ತು ಕಲಿಸಬಹುದು - ಶಿಸ್ತಿನ ಅರ್ಥವನ್ನು ಒಬ್ಬನಿಗೆ ತಿಳಿಸಲು ಎರಡು ಜನ್ಮವೆತ್ತಿದರೂ ಆಗದು.

**ಶಿಸ್ತುಭಂಗ ಕ್ರಮ** ಕತ್ತೆಯನ್ನು ಕತ್ತೆ ಎಂದಾಗ ಅದು ಕಾಲು ಜಾಡಿಸುವ ಕ್ರಮ.

**ಶಿಕ್ಷಕ** ಶಿಕ್ಷಿಸುವವನು, ಇತರರನ್ನು - ತನ್ನ ತಪ್ಪಿಗಾಗಿ ?

**ಶಿಕ್ಷಣ** ಕ್ಷಣಮಾತ್ರವೇ ಶಿಹಿ ಇರುವಂತಹದೇ ಶಿಕ್ಷಣ- ಉದಾ: ಮಾಸ್ತರು ಕಿವಿ ಜಿಟ್ಟಾಗ, ಮಾಸ್ತರಿಗೆ ಕಾಯಿಲೆ ಎಂದು ಕೇಳಿದಾಗ, ಇತ್ಯಾದಿ.

**ಶಿಕ್ಷೆ** ಕ್ಷಮೆ ಗರತಿ - ಶಿಕ್ಷೆ ಸೂಳೆ ; ಕೆಟ್ಟುದನ್ನು ಮಾಡಬೇಡ ಎಂದು ಹೇಳುವುದಷ್ಟೇ ಶಿಕ್ಷೆಯ ಕೆಲಸ - ಒಳ್ಳೆಯದು ಮಾಡು ಎಂದು ಅದೆಲ್ಲಿ ಹೇಳುತ್ತದೆ ?

**ಶ್ರೀಮತಿ** ಶ್ರೀಯನ್ನು (ಹಣವನ್ನು) ಗಳಿಸುವುದರಲ್ಲಿಯೇ ಮತಿಯನ್ನೆಲ್ಲ ವ್ಯಯ ಮಾಡುವವಳೇ ಶ್ರೀಮತಿ.

**ಶ್ರೀಮಂತ** ಶ್ರೀಮಂತನ ವಂಶವೃಕ್ಷದಲ್ಲಿ ಒಬ್ಬ ದುಷ್ಟ ಜಾಣ, ದರಿದ್ರನ ವಂಶವೃಕ್ಷದಲ್ಲಿ ಒಬ್ಬ ದಡ್ಡ ಧರ್ಮಿಷ್ಠ ಇದ್ದೇ ಇರುತ್ತಾರೆ ; ಶ್ರೀಮಂತಿಕೆಯು ಪಾಪದ ಫಲವಾದರೆ, ಬಡತನವು ಪಾಪಕ್ಕೆ ಸಾಧನೆ ; ಕಾಲುಗಳನ್ನು ಕಾರಿನ ಸ್ವಾಧೀನಕ್ಕೆ, ಹೊಟ್ಟೆಯನ್ನು ಡಾಕ್ಟರನ ಸ್ವಾಧೀನಕ್ಕೆ, ಇರುವ ಕೊಂಚ ಹೃದಯವನ್ನು ಹಣದ ಸ್ವಾಧೀನಕ್ಕೆ ಕೊಟ್ಟು, ಕಾರು, ಡಾಕ್ಟರು, ಹಣ ಎಲ್ಲವೂ ತನ್ನ ಸ್ವಾಧೀನದಲ್ಲಿವೆ ಎಂದು ಭ್ರಮಿಸುವವನು, ಚುನಾವಣೆಯಲ್ಲಿ ಸ್ಪರ್ಧಿಸದೆ ಬಡವನಾಗಲಾರ - ಚುನಾವಣೆಯಲ್ಲಿ ಸಹಾಯ ಮಾಡದೆ ಶ್ರೀಮಂತನಾಗಲಾರ ; ಹೊಟ್ಟೆ ಶ್ರೀಮಂತ - ಬೆನ್ನು ಬಡವ ; ಒಂದೇ ಗಂಟೆಯಲ್ಲಿ ಶ್ರೀಮಂತನಾಗಬೇಕೆನ್ನುವವನು ಅರ್ಧಗಂಟೆಯಲ್ಲಿ ದರಿದ್ರನಾದರೆ ಆಶ್ಚರ್ಯವೇ ? ತನಗೇ ತಿಳಿಯದೆ ಶ್ರೀಮಂತನು ಅದೆಷ್ಟೋ ಬಂಧುಗಳನ್ನು ಗಳಿಸುತ್ತಾನೆ ; ಶ್ರೀಮಂತನಾಗುವುದು ಬಹು ಸುಲಭ, ದೇವನ ಕಡೆ ಬೆನ್ನು ಮಾಡಿದರಾಯಿತು. ಮಾನವ ಚರಿತ್ರೆಯಲ್ಲಿ ಯಾವ ಶ್ರೀಮಂತನು ಯಾವ ಬಡವನಿಗೂ ಸಹಾಯ ಮಾಡಿದುದಿಲ್ಲ. ಶ್ರೀಮಂತನಾಗಲು ಅಷ್ಟೇಬೇಕು ಇಷ್ಟೇಬೇಕು ಎಂಬುದಿಷ್ಟೂ ಇಲ್ಲ - ಗಳಿಕೆಗಿಂತಲೂ ಕಡಿಮೆ

ಖರ್ಚು ಮಾಡುವವನೇ ಶ್ರೀಮಂತ, ಖರ್ಚಿಗಿಂತಲೂ ಕಡಿಮೆ ಗಳಿಸುವವನೇ ದರಿದ್ರ.

**ಶ್ರೀಮಂತಿಕೆ** ಶ್ರೀಮಂತಿಕೆಯನ್ನು ಬೈಯ್ಯದವರೇ ಇಲ್ಲ - ಶ್ರೀಮಂತಿಕೆ ಬೇಡವೆಂದವರೂ ಇಲ್ಲ ; ಶ್ರೀಮಂತಿಕೆಗೆ ದಾಸನಾಗುವ ಬದಲು ಬಡತನಕ್ಕೆ ಒಢೆಯನಾಗು ; ಶ್ರೀಮಂತಿಕೆಯ ಗುಟ್ಟು 'ಗಳಿಸು ' ಎಂಬುದಲ್ಲ, 'ಉಳಿಸು' ಎಂಬುದು ; ಶ್ರೀಮಂತಿಕೆಗೆ ಅದೆಷ್ಟೋ ಗುಲಾಮರು - ಮೊದಲ ಗುಲಾಮ ಶ್ರೀಮಂತ.

**ಶೀಲ** ಶೀಲವೇ ಹೊನ್ನಕಳಸ - ಪಾಪ ! ಎಷ್ಟು ಜನರಿಗೆ ತಾನೇ ಸಾಧ್ಯವಾದೀತು, ಇಷ್ಟು ಬೆಲೆ ಮತ್ತು ಅಷ್ಟು ಎತ್ತರವಿರುವುದನ್ನು ಗಳಿಸಲು ?

**ಶುದ್ಧ ಹೃದಯ** ಶುದ್ಧ ಹೃದಯ ಉಳ್ಳವನು ದೇವನನ್ನು ನೋಡು ತ್ತಾನೆ - ಇಲ್ಲದವನನ್ನು ದೇವನೇ ನೋಡುತ್ತಾನೆ.

**ಶೇಷ ಪ್ರಶ್ನೆ** ಪರೀಕ್ಷೆಯಲ್ಲಿ ಉತ್ತರ ಬರೆಯದೆ ವಿದ್ಯಾರ್ಥಿ ಬಿಟ್ಟು ಬಂದ ಪ್ರಶ್ನೆ.

**ಶೋಕ** ಮುನಿಸಿಪಲ್ ಪ್ರೆಸಿಡೆಂಟರು ಸತ್ತಾಗ ಇಡೀ ಊರೇ ಶೋಕ ಪ್ರದರ್ಶನ ಮಾಡತಕ್ಕದ್ದೆಂದು ಒತ್ತಾಯದ ಹುಕುಂ ಬಂದ ಕಾರಣ ಎಲ್ಲ ಮನರಂಜನ ಕಾರ್ಯಕ್ರಮಗಳನ್ನು ನಿಲ್ಲಿಸಿದರು. ನಾಟಕದವರು ನಿಜವಾಗಿಯೂ ಶೋಕಿಸಿದರು,ಉಳಿದವರು ಶೋಕದ ನಾಟಕವಾಡಿದರು.

**ಶಾಂತಿ** ಎರಡೇ ಬಗೆಯವರಿಗೆ ಶಾಂತಿ ದೊರೆಯುತ್ತದೆ - ಧರ್ಮದ ದಾರಿಯನ್ನು ಹಿಡಿದವನಿಗೆ ಮತ್ತು ಧರ್ಮದ ದಾರಿಯನ್ನೇ ಕಾಣದವನಿಗೆ ; ಶಾಂತಿ ಬೇಕೆನ್ನುವವನು ಯುದ್ಧಕ್ಕೆ ಸಿದ್ಧವಾಗಿರಲಿ ; ಗರ್ಭದಲ್ಲಿರುವ ಯುದ್ಧಕ್ಕೆ ಶಾಂತಿಯೆಂದು ಹೆಸರು.

ಮಂತ್ರಿಗಳಿಗೆ ಮಾತನಾಡಲು, ಮಹಿಳೆಯರಿಗೆ ಸುಮ್ಮನಿರಲು, ಸಾಹಿತಿಗಳಿಗೆ ಅಸೂಯೆ ಪಡದಿರಲು ಬಂದಿದ್ದರೆ ಶಾಂತಿಯು ಕಸದ ತಿಪ್ಪೆಯಲ್ಲಿಯೂ ಬಿದ್ದಿರುತ್ತಿತ್ತು ; ಕ್ರಾಂತಿಯ ಮಲಮಗಳೇ ಶಾಂತಿ.

**ಶೃಂಗಾರ** ಯೌವ್ವನವು ಹೋದ ನಂತರ ಶೃಂಗಾರವೇ ಗತಿ ; ಯುವಕನಿಗೆ ಶೃಂಗಾರವು ಬೇಕು - ವೃದ್ಧನಿಗೆ ಶೃಂಗಾರವೇ ಸಾಕು.



**ಷಡಾಕ್ಷರಿ** ಪ-ನೇ-ನೂ-ಗೊ-ತ್ತಿ-ಲ್ಲ ; ಪಂಚಾಕ್ಷರಿ ನೋಡಿರಿ.

**ಷೇಕ್ಸಪಿಯರ್** ಇದು ಶೇಷಪ್ಪ ಐಯ್ಯರ್ ಎಂಬ ಸುಪ್ರಸಿದ್ಧ ದಕ್ಷಿಣದ ತಮಿಳು ಬ್ರಾಹ್ಮಣ ಕವಿಯ ಹೆಸರೋ, ಅಥವಾ ಷೇಕ್ ಪೀರಾ ಎಂಬ ಪ್ರಖ್ಯಾತ ಮುಸ್ಲಿಂ ಸಾಹಿತಿಯ ಹೆಸರೋ ಎಂಬುದು ಇನ್ನೂ ನಿಶ್ಚಯವಾಗಿಲ್ಲವಂತೆ.



**ಸಕುಟುಂಬ** ಸುಂದರಿಯ ಗಂಡನಿಗೆ ಸದಾ ಸಕುಟುಂಬ ಸ್ವಾಗತ

**ಸ್ವರ್ಗ** ತಾಯಿಯ ಪಾದದಡಿ ಇರುವ ದಿವ್ಯ ಲೋಕ ; ಸಕುಟುಂಬವಾಗಿ ಸ್ವರ್ಗದಲ್ಲಿರುವುದಕ್ಕಿಂತಲೂ ಏಕಾಂಗಿಯಾಗಿ ನರಕದಲ್ಲಿರುವುದೇ ಮೇಲು ; ಪ್ರತ್ಯೇಕವಾಗಿ ಸ್ವರ್ಗದ ಸೃಷ್ಟಿಯಾದುದು ಒಳಿತಾಯಿತು - ಸ್ವರ್ಗಕ್ಕೆ ಲಾಯಿಖಾದ ಜನರೂ ನರಕಕ್ಕೆ

ಸುಗ್ಗಿದ್ದರೆ ನರಕವಾಸಿಗಳಿಗೆ ತೊಂದರೆಯಾಗುತ್ತಿತ್ತು ; ಸಜ್ಜನರೆಲ್ಲರೂ ಜಾಣರಾಗದಿದ್ದರೆ ಹೋಗಲಿ, ಜಾಣರೆಲ್ಲರೂ ಸಜ್ಜನರಾಗಿದ್ದರೆ ಈ ಭೂಲೋಕವೇ ಸ್ವರ್ಗವಾಗುತ್ತಿತ್ತು. ಕೆಡುಕು ಮಾಡದವರೆಲ್ಲರೂ ಸ್ವರ್ಗಕ್ಕೆ ಹೋಗುತ್ತಾರೆ. ಹೆಚ್ಚು ಕತ್ತೆ, ನಾಯಿಗಳೇ ಅಲ್ಲಿರಬೇಕು, ಹಾಗಾದರೆ ; ಕುರುಡು ಹೆಂಡತಿ, ಕಿವುಡು ಗಂಡ ಇರುವ ಮನೆಯೆ ಸ್ವರ್ಗ ; ಉತ್ತಮ ಪುರುಷನು ಸ್ವರ್ಗಕ್ಕೆ ಲಾಯಿಖು, ಅಧಮ ಪುರುಷನು ಭೂಲೋಕಕ್ಕೆ ಲಾಯಿಖು - ಉತ್ತಮ ಸ್ತ್ರೀ ಸ್ವರ್ಗಕ್ಕೆ ಲಾಯಿಖು, ಅಧಮ ಸ್ತ್ರೀ ನರಕಕ್ಕೂ ನಾಲಾಯಿಖು ; ಸ್ವರ್ಗದಲ್ಲಿ ಓಡಾಡುವವರೆಲ್ಲ ಪುಣ್ಯಶಾಲಿಗಳಲ್ಲ - ವರ್ತಮಾನ ಪತ್ರಿಕೆಯ ಸುದ್ದಿಗಾರರೂ ಬಂದು ಹೋಗುತ್ತಾರೆ ; ಭೂಲೋಕದ ಪುಣ್ಯವಂತರೆಲ್ಲರೂ ಒಂದೇ ಬಾರಿಗೆ ಸ್ವರ್ಗಕ್ಕೆ ಹೋದರೆ ಭೂಲೋಕವು ಸ್ವರ್ಗಕ್ಕಿಂತಲೂ ಸುಖವಾಗಿರಬಹುದು. ಸ್ವರ್ಗಕ್ಕೆ ಬಂದವರಲ್ಲಿ ಸತ್ತವರಿಗಿಂತಲೂ ಕೊಲ್ಲಿಸಿಕೊಂಡವರೇ ಹೆಚ್ಚು - ಉದಾ : ಕ್ರಿಸ್ತ, ಗಾಂಧಿ ; ಸ್ವರ್ಗವೆಂದರೆ ಪ್ರತಿಯೊಬ್ಬನ ಬಾಯಿಯೂ ನೀರೊಡೆಯುತ್ತದೆ - ಅಲ್ಲಿ ಮದುವೆ ಮತ್ತು ಭಾಷಣ ಇಲ್ಲವಂತೆ ; ದೇವನು ಸ್ವರ್ಗದಲ್ಲಿದ್ದಾನೆ - ಭೂಲೋಕವು ಹಾಯಾಗಿದೆ ; ಪೂರ್ಣ ಹಣವನ್ನು ಅಡ್ವಾನ್ಸಾಗಿ ತೆಗೆದುಕೊಂಡು, ನಂತರ ರೂಮು ಕೊಡುವ ಆಶೆಬುರುಕನ ಹೋಟೆಲಿಗೆ ಸ್ವರ್ಗ ಎನ್ನುತ್ತಾರೆ ; ಈ ಮೂವರಿಗೆ ಮಾತ್ರವೇ ಸ್ವರ್ಗವು ಸಿಗುತ್ತದೆ - ಹುಟ್ಟುವ ಮುನ್ನ ಸತ್ತ ಶಿಶು, ಶಿಷ್ಯ ದೊರೆಯುವ ಮುನ್ನ ಸತ್ತ ಸನ್ಯಾಸಿ ಮತ್ತು ರೈತ ; ಸ್ವರ್ಗನರಕಗಳೆರಡನ್ನು ತನ್ನಲ್ಲಿಯೇ ಕಾಣಲಾರದವನು ಎರಡಕ್ಕೂ ನಾಲಾಯಿಕ್ಕು ; ಸ್ವರ್ಗದ ತುಂಬ ಬರೀ ಕಿವುಡರೇ ಇದ್ದಾರೆ -

ಕೆಡುಕನ್ನು ಕಿವಿಯಿಂದ ಸಹ ಕೇಳದವರಿಗೆ ಮಾತ್ರವೇ ಸ್ವರ್ಗವಂತೆ ; ಸ್ವರ್ಗದಲ್ಲಿ ಗಂಡು ಹೆಂಣು ಕೂಡ ಇವೆ - ಲಗ್ನಮಾಡಿಸಲು ಪುರೋಹಿತರನ್ನು ಮಾತ್ರ ನರಕದಿಂದಲೇ ತರಬೇಕು ; ಸ್ವರ್ಗವನ್ನು ಹೊಗಳುವವರು ಅದೇಕೋ ಇನ್ನೂ ಭೂಲೋಕದಲ್ಲಿಯೇ ಇದ್ದಾರೆ - ಸ್ವರ್ಗ ಬೇಕೆನ್ನುವವನು ಸಾಯಲಿಕ್ಕೇ ಅಂಜಿದರೆ ಹೇಗೆ ? ದೇಹದೊಂದಿಗೆ ಸ್ವರ್ಗಕ್ಕೇ ಹೋಗುವುದು ಸಾಧ್ಯವಿದ್ದಿದ್ದರೆ, ಬರೀ ಅಂಗಿಗೆ ಮಾತ್ರವೇ ಏಕೆ, ಉಟ್ಟ ಪಂಚೆ, ಸುತ್ತಿದ ರುಮಾಲುಗಿಗೂ ಜೇಬುಗಳೇ ಜೇಬುಗಳು ; ಸ್ವರ್ಗಕ್ಕೆ ಹೋಗಿ ಬಂದ ತಿಂಮ ಹೀಗೆ ಹೇಳಿದ - ಮೂರು ಮಹದಾಶ್ಚರ್ಯಗಳನ್ನು ಕಂಡೆ - ಅಲ್ಲಿಗೆ ಎಂದೆಂದಿಗೂ ಬರಲಾರರೆಂದು ನಾನು ತಿಳಿದವರೆಲ್ಲರೂ ಅಲ್ಲಿಯೇ ಇದ್ದರು, ಅಲ್ಲಿಗೆ ಬಂದೇ ಇರಬೇಕೆಂದು ನಾನು ತಿಳಿದವರಲ್ಲಿ ಒಬ್ಬರೂ ಅಲ್ಲಿಲ್ಲ. ಮೂರನೆಯದು ಅತ್ಯದ್ಭುತಾಶ್ಚರ್ಯ - ನಾನು ಅಲ್ಲಿ ಇದ್ದೆ !

**ಸ್ವರ್ಗಸ್ಥ** ಕೆಟ್ಟವರು ಸಾಯುತ್ತಾರೆ - ಒಳ್ಳೆಯವರು ಸ್ವರ್ಗಸ್ಥರಾಗುತ್ತಾರೆ.

**ಸ್ವಗ್ರಾಮ** ಸ್ವಗ್ರಾಮದಲ್ಲಿ ಗೌರವವಿಲ್ಲದವನಿಗೆ ಸುಡುಗಾಡಿ ನಲ್ಲೊಂದೇ ಸ್ವಾಗತ.

**ಸಜ್ಜನ** ಸತ್ತಜನ ಸಜ್ಜನ - ಇನ್ನು ಮೇಲಂತೂ ಇವನಿಂದ ಯಾವ ಕೆಡುಕೂ ಆಗುವಂತಿಲ್ಲವಲ್ಲ ; ಸರ್ಜನ್‌ರಲ್ಲಿ ದುರ್ಜನರಿರುವಂತೆ ಸಜ್ಜನರೂ ಇರಬಹುದು.

**ಸತ್ತವರು** ಕೆಲವರು ಸತ್ತಿರುವವರಿಗಿಂತಲೂ ಬದುಕಿರುವ ಅನೇಕರೇ ಹೆಚ್ಚು ಸತ್ತಿದ್ದಾರೆ.

**ಸತ್ಯ** ಸತ್ಯವೆಂಬುದು ತಾಯಿತಂದೆ - ಮಗನು ಪ್ರಾಯಕ್ಕೆ ಬಂದಂತೆಲ್ಲ ತಂದೆತಾಯಿಗಳು ದೂರವಾಗುತ್ತಾರೆ. ನಾವು ಆಡುವ ಸುಳ್ಳೇ ಸತ್ಯ ; ಸತ್ಯಕ್ಕೆ ಸಾವಿಲ್ಲ ಎಂಬ ಸುಳ್ಳು ಸತ್ಯವಲ್ಲ - ಸುಳ್ಳಾಡುವವನ ಬಾಯಿಂದ ಬರುವ ಸತ್ಯವನ್ನೂ ನಂಬುವವರಿಲ್ಲ ; ಸತ್ಯವು ಶಿಶುವಿನಂತೆ - ಬತ್ತಲೆ ಇದ್ದಷ್ಟೂ ಸೌಂದರ್ಯವು ಹೆಚ್ಚು ; ನಾನು ನಮ್ಮ ಆಚಾರ್ಯರು, ನಲವತ್ತು ಕಡುಬು ತಿಂದೆವು ಎಂಬುದು ಸತ್ಯ - ಆಚಾರ್ಯರು ಒಂದೇ ತಿಂದರು, ನಾನು ಮುವತ್ತೊಂಭತ್ತು ತಿಂದೆ ಎಂಬ ಸತ್ಯವನ್ನು ಹೇಳದಿದ್ದರೂ ; ಒಂದು ಬಾರಿ ಸತ್ಯವನ್ನಾಡು, ಜಗತ್ತು ತಲೆಯ ಮೇಲೆ ಹೊತ್ತು ಕುಣಿಯುತ್ತದೆ - ಎರಡನೆ ಬಾರಿ ಭುಜಕ್ಕೆ ಇಳಿಸುತ್ತದೆ - ಮೂರನೇ ಬಾರಿ ಕಾಲಡಿ ಹಾಕಿ ತುಳಿಯುತ್ತದೆ. ನಂತರ ತಿರುಗಿ ಸಹ ನೋಡದು ; ಎಲ್ಲ ಕಾಲದಲ್ಲಿಯೂ, ಎಲ್ಲ ಸತ್ಯವನ್ನೂ, ಎಲ್ಲರಿಗೂ ಹೇಳಬೇಡ ; ಸತ್ಯವನ್ನಾಡದವನು ಸತ್ಯವನ್ನು ಹೇಗೆ ನಂಬಿಯಾನು ? ಸತ್ಯವನ್ನಾಡುವವನು ಸತ್ಯವನ್ನು ಹೇಗೆ ನಂಬಿಯಾನು ? ಸತ್ಯವನ್ನು ಕೊಳ್ಳುವದೂ ಮಾರಿದಷ್ಟೇ ಪಾಪ ; ಸುಳ್ಳನ್ನಾಡು, ನಾಲ್ಕಾರು ಗೆಳೆಯರಾಗುತ್ತಾರೆ - ಸತ್ಯವನ್ನಾಡು, ಸಾವಿರಾರು ಶತ್ರುಗಳಾಗುತ್ತಾರೆ ; ಬದುಕಿರುವವನ ತುಟಿಯ ಮೇಲೆ ಬದುಕುತ್ತದೆ ; ಸಾಯುವ ಸತ್ಯವು ಸಾಯುವವನ ತುಟಿಯ ಮೇಲೆ ಬದುಕುತ್ತದೆ ಸತ್ಯವೇ ದೇವರೆಂಬುದು ಸುಳ್ಳಲ್ಲ - ಇಲ್ಲದಿದ್ದಲ್ಲಿ ಕಲ್ಲಾಗಿ ಏಕೆ ಬೀಳುತ್ತಿತ್ತು ? ಸತ್ಯವು ಒಂದು ಹೆಣ - ಎಂದಿಗಾದರೂ ಮೇಲೆ ತೇಲಲೇಬೇಕು ; ಸಮಾಜದಲ್ಲಿ ಸತ್ಯಕ್ಕೆ ದೊಡ್ಡ ಗೌರವವಿದೆ - ಅಸತ್ಯಕ್ಕೆ ಒಳ್ಳೆಯ ಸ್ಥಾನವಿದೆ ; ಹೇಳುವ ಸತ್ಯವು ಬಾಳುವ ಸತ್ಯದ ಮುಂದೆ ತಲೆ ತಗ್ಗಿಸುತ್ತದೆ ; ಎಲ್ಲರೂ ಹೇಳಿದ ಮಾತ್ರಕ್ಕೆ ಸುಳ್ಳು ಸತ್ಯವಾಗುವುದಿಲ್ಲ.

**ಸತ್ಯವಾದಿ** ಇತರರಿಗೆ ಕಹಿಯೆಂಬ ಕಾರಣದಿಂದಲೇ ಸತ್ಯವನ್ನಾಡು ವವನು ; ಅಸತ್ಯಕ್ಕಿಂತಲೂ ಸತ್ಯದಿಂದಲೇ ಹೆಚ್ಚು ಲಾಭವಾಗುವಾಗ ಸತ್ಯವಾದಿಗಳು ಗೇಣಿಗೊಬ್ಬರು ಹುಟ್ಟುತ್ತಾರೆ.

**ಸತ್ವ** ಉಳಿದೆರಡು ಗುಣಗಳಿಗೂ ನಾಲಾಯಖ್ ಆದವನಿಗೆ ಸತ್ವಗುಣವೇ ಗತಿ.

**ಸತ್ಯಾಗ್ರಹ** ಸತಿಯು ಮಾಡುವ ಆಗ್ರಹವೇ ಸತ್ಯಾಗ್ರಹ.

**ಸ್ವತಂತ್ರಜೀವಿ** ಹೆಂಡತಿ ಸತ್ತ ಧನ್ಯಪುರುಷ.

**ಸದ್ಗುಣ** ಹೇರಳವಾಗಿ ಹೊಗಳಿಸಿಕೊಳ್ಳಲ್ಪಡುತ್ತದೆ - ಬೇಗ ಸಾಯುತ್ತದೆ, ಅಳುವವರೂ ಗತಿ ಇಲ್ಲದೆ.

**ಸ್ತನಭ್ರಷ್ಟ** ತಾಯಿ ಸತ್ತ ಮಗು ; ಹೆಂಡತಿ ಸತ್ತ ಗಂಡ.

**ಸನ್ಯಾಸ** ಸನ್ಯಾಸದಲ್ಲಿ ಮೂರು ಬಗೆ - ಗೃಹಸ್ಥಾಶ್ರಮದ ಗೋಜಿಗೆ ಹೋಗದೆ ಸನ್ಯಾಸ ದೀಕ್ಷೆ ಪಡೆವುದು, ಗೃಹಸ್ಥಾಶ್ರಮವನ್ನು ಮುಗಿಸಿ ಸನ್ಯಾಸಿಯಾಗುವುದು, ಸನ್ಯಾಸವನ್ನು ಸ್ವೀಕರಿಸಿ ಆಗಾಗ್ಗೆ ಗೃಹಸ್ಥಾಶ್ರಮವನ್ನು ಅನುಭೋಗಿಸುವುದು.

**ಸನ್ಯಾಸಿ** ಅತೃಪ್ತ ಸಂಸಾರಿ ಸತ್ತರೆ ಪಿಶಾಚಿಯಾಗುತ್ತಾನೆ - ಅತೃಪ್ತ ಪಿಶಾಚಿ ಸತ್ತರೆ ಸನ್ಯಾಸಿಯಾಗುತ್ತದೆ - ಅತೃಪ್ತ ಸನ್ಯಾಸಿ ಸತ್ತರೆ ಅವನ ಸನ್ಯಾಸ ಮಾತ್ರವೇ ಸಾಯುತ್ತದೆ ; ಹಳೆಯ ಪಾಪಗಳಿಗೆ ರಶೀದು ಬರೆ ಯುತ್ತಲೇ ಹೊಸ ಪುಣ್ಯಗಳಿಗೆ ಸುಳ್ಳು ಚೆಕ್ಕು ಕೊಡು ವನು ; ಹೊಸ ಬಾಟ್ಲಿಯಿಂದ ಬಂದ ಹಳೆಸೆರೆ ಸನ್ಯಾಸಿಯ ಪಾಪ (ಕೂಸು) ಸೂಳೆಗೆ ; ಸನ್ಯಾಸಿಯ ಅವಿವೇಕದಿಂದ ಸೂಳೆಯರು ಉದಯಿಸುತ್ತಾರೆ - ಸೂಳೆಯ ವಿವೇಕದಿಂದ ಸನ್ಯಾಸಿಗಳು ಹುಟ್ಟುತ್ತಾರೆ

ಕಾಗದದ ಬಳಿ ಕತ್ತೆಯನ್ನು, ದೀಪದ ಬಳಿ ಕರ್ಪೂರವನ್ನು, ಸನ್ಯಾಸಿಯ ಬಳಿ ಹೆಂಣನ್ನು ತರಬೇಡ.

**ಸನ್ನಿವೇಶ** ಸನ್ನಿವೇಶಗಳು ತನ್ನ ಸೃಷ್ಟಿಯೆಂದು ಮಾನವನು ತಿಳಿಯುತ್ತಾನೆ. ಮಾನವನು ತನ್ನ ಸೃಷ್ಟಿಯೆಂಬುದು ಸನ್ನಿವೇಶಕ್ಕೆ ಗೊತ್ತು.

**ಸಪತಿ** ಗಂಡು ಸವತಿ, ಅರ್ಥಾತ್ ಒಂದೇ ಹೆಂಣಿನ ಇನ್ನೊಬ್ಬ ಗಂಡ.

**ಸ್ವಭಾವ** ಸ್ವಂತ ಅಕ್ಕನ ಗಂಡ ; ಇಂದು ಬೇಡೆಂಬುದುದನ್ನು ನಾಳೆ ಬೇಕೆನ್ನುವುದು ಮಾನವ ಸ್ವಭಾವ - ಇಂದೂ ಬೇಕು, ನಾಳೆಯೂ ಬೇಕು ಎನ್ನುವುದು ಅಳಿಯನ ಪ್ರಭಾವ.

**ಸಮಯ** ಇಷ್ಟವಿಲ್ಲದವನಿಗೆ ಸಮಯವೂ ಇಲ್ಲ ; ಸುಖದಲ್ಲಿದ್ದಾಗ ಸಮಯವು ಕುದುರೆಯಂತೆ ಮುಂದು ಮುಂದು ಓಡುತ್ತದೆ. ಕಷ್ಟದಲ್ಲಿದ್ದಾಗ ಕತ್ತೆಯಂತೆ ಇದ್ದಲ್ಲಿಯೇ ಸುತ್ತುತ್ತದೆ ; ಸಮಯವು ಹೆಚ್ಚು ಇದ್ದಷ್ಟೂ ಹಣವು ಹಾಳು - ಹಣವು ಕಡಿಮೆ ಇದ್ದಷ್ಟು ಸಮಯ ಹಾಳು.

**ಸಮಾಚಾರ** ಸಮ + ಆಚಾರ - ರಾತ್ರಿ ಹಗಲು ಕೂಡ ಸಿದ್ಧಿಸುವುದು ; ದಿಲ್ಲಿಯ ಸಮಾಚಾರ ತಿಳಿಯಬೇಕಾದರೆ ಹಳ್ಳಿಯಲ್ಲಿ ವಿಚಾರಿಸು.

**ಸಮಾಜ** ಸಮ + ಅಜ - ಒಂದೇ ಅಳತೆಯ ಕುರಿಗಳ ಗುಂಪು, ಉದಾ - ಮಹಿಳಾ ಸಮಾಜ, ಸನ್ಮಾರ್ಗ ಸಮಾಜ ಇತ್ಯಾದಿ ; ತನ್ನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ಸಮಾಜ - ಉದಾ : ಸುಧಾರಕನಿಗೆ. ತಾನೊಬ್ಬನೇ

ಸಮುಮಾಜ - ಉದಾ: ಸಮಾಜ ಸೇವಕನಿಗೆ ; ಅಂಜುವವನನ್ನು ತಿನ್ನಲು ಬರುತ್ತದೆ - ಅಂಜಿಸುವವನ ಕಾಲು ನೆಕ್ಕುತ್ತದೆ.

**ಸಮಾಜಸೇವಕ** ಅವರಿವರ ಹೊಲದಲ್ಲಿ ಮೇದು ಬಂದು ತನ್ನ ಮನೆಯಲ್ಲಿ ಹಾಲು ಹಿಂಡುವ ಹಸು ; ಸಮಾಜಸೇವಕರಲ್ಲಿ ಮೂರು ಬಗೆ, ವ್ಯಕ್ತಿಗಳ ಗಂಟು ಎಗರಿಸುವವರು, ಸಂಘ ಸಂಸ್ಥೆಗಳ ಫಂಡು ನುಂಗುವವರು, ಗುಡಿಮಠಗಳ ಆಸ್ತಿಯನ್ನು ಜೀರ್ಣಿಸುವವರು - ಮೂರನೆಯ ಬಗೆಯವನನ್ನು ದೇವನು ಕ್ಷಮಿಸಬಹುದು.

**ಸಮೀಪ** ಹೆಣ್ಣು ದೂರ ಇಕ್ಕುವದರಿಂದಲೇ ಗಂಡು ಸಮೀಪ ಬರಲು ಹಾತೊರೆಯುತ್ತದೆ. ಕೈಗೆ ದೂರವಿದ್ದಷ್ಟು ಹೆಣ್ಣು ಕಣ್ಣಿಗೆ ಸಮೀಪವಾಗುತ್ತದೆ.

**ಸಮುದ್ರ** ಎಲ್ಲಾ ನದಿಗಳೂ ಸಮುದ್ರಕ್ಕೆ ಹರಿಯುತ್ತವೆ. ಇನ್ನೂ ತುಂಬಿಲ್ಲವೇ ?

**ಸಮ್ಮೇಳನ** ವೈಯ್ಯಕ್ತಿಕವಾಗಿ ಎಂದೂ ಏನೂ ಮಾಡಲಾರದವರೆಲ್ಲರೂ ಒಂದು ದಿನ ಒಟ್ಟಾಗಿ ಸೇರಿ, ಏನ್ನೂ ಮಾಡಲೂ ಸಾಧ್ಯವಿಲ್ಲವೆಂದು ಹೇಳುವ, ಏನೂ ಮಾಡಲಾರದ ಮಹಾ ಮಹಾಜನರ ಮಹಾಸಭೆ.

**ಸರಕಾರ** ಉಳಿ ಹಿಡಿಯಲು ಕಲಿಯದವನು ಬಡಗಿ ಕೆಲಸ ಮಾಡಲು ಬರುವುದಿಲ್ಲ. ಸವುಟು ಹಿಡಿಯಲು ಕಲಿಯದವನು ಅಡುಗೆ ಕೆಲಸ ಮಾಡಲು ಬರುವುದಿಲ್ಲ, ಕತ್ತಿ ಹಿಡಿಯಲು ಕಲಿಯದವನು ಕ್ಷೌರದ ಕೆಲಸ ಮಾಡಲು ಬರುವುದಿಲ್ಲ. ಕತ್ತೆಯ

ಕಾಲು ಕಟ್ಟಲು ಕಲಿಯುವವನು ಅಗಸನ ಕೆಲಸ ಮಾಡಲು ಬರುವುದಿಲ್ಲ — ಏನೂ ಕಲಿಯದವನು ಸರ ಕಾರದ ಸೂತ್ರ ಹಿಡಿಯಲು ಮುಂದು ಬರುತ್ತಾನೆ ; ಬೈಗಳನ್ನು ಬಲ್ಲವನು ವಿರೋಧ ಪಕ್ಷವಲ್ಲಿ ಸೇರಬೇಕು — ಲಜ್ಜೆಗೇಡಿಯಾದವನು ಸರಕಾರದ ಪಕ್ಷದಲ್ಲಿ ಸೇರಬೇಕು ; ಬೆಂಕಿ, ನೀರು, ಸರಕಾರ, ಇವಕ್ಕೊ ದಯೆ ಇದ್ದರೇನು ಗತಿ ? ಒಳಿತನ್ನು ಸುಲಭವಾಗಿ ಮಾಡಲು, ಕೆಡುಕನ್ನು ಕಷ್ಟದಿಂದ ಮಾಡಲು ಅನುವು ಮಾಡಿಕೊಡುವುದೇ ಒಳ್ಳೆಯ ಸರಕಾರ.

**ಸರಸ್ವತಿ ಗಂಟು** ಕುಬುಸದ ಗಂಟು ; ಬ್ರಹ್ಮಗಂಟು ನೋಡಿರಿ.

**ಸವತಿ** ಸವತಿಯನ್ನು ರಂಡೆ ಎಂದು ಬೈದವಳ ಸೌಭಾಗ್ಯ ವೆಷ್ಟು ? ಸಾಹಿತಿಯ ಹೆಂಡತಿಯಾಗಿ ಸವತಿ ಬೇಡ ಎಂದರೆ ಆದೀತೆ ? ಸಾಹಿತ್ಯವೇ ಅವಳ ಪ್ರಥಮ ಸವತಿ.

**ಸ್ಪಷ್ಟವಾದಿ** ಕುಡಿದಾಗ ಮಾತ್ರ ಅಸ್ಪಷ್ಟವಾದಿ - ಇಳಿದ ನಂತರ ಎಲ್ಲರೂ ಸ್ಪಷ್ಟವಾದಿಗಳೇ !

**ಸಹನೆ** ಸಹನೆಗೆ ಅದೆಷ್ಟೊ ಕೊರತೆ ಇಲ್ಲ - ಇತರರ ಕಷ್ಟವನ್ನೂ ತಮ್ಮ ಸುಖವನ್ನೂ ಸಮನಾಗಿ ಸಹಿಸುವವರು ಸಾಕಷ್ಟು ಇದ್ದಾರೆ.

**ಸಹಾಯ** ನೀನು ಯಾವನಿಗೆ ಸಹಾಯ ಮಾಡುವಿಯೋ ಅವನನ್ನು ಆದಷ್ಟು ದೂರವಿಡು ; ಬೆಳಕಿನಲ್ಲಿ ಕೈದೀಪವನ್ನು ಕೊಟ್ಟು ಕತ್ತಲಲ್ಲಿ ಕಸಿದುಕೊಳ್ಳುವ ಉಪಕಾರ, ಸೆಕೆ ಇದ್ದಾಗ ಕಂಬಳಿ ಕೊಟ್ಟು ಚಳಿಯಾದಾಗ ಕಸಿದುಕೊಳ್ಳುವ ಔದಾರ್ಯ,

ಸಿಹಿನೀರಿನಲ್ಲಿ ಮುಳುಗಿ ಸಾಯುತ್ತಿರುವವನಿಗೆ ಕುಡಿಯಲು ಉಪ್ಪು, ನೀರು ಕೊಡುವ ಸತ್ಕಾರ್ಯ, ಇವೆಲ್ಲವೂ ಸಹಾಯಗಳೇ ; ಹೆಂಣಿಗೆ ಗಂಡಿನ ಸಹಾಯವು ಬೇಕೇಬೇಕು - ಪಾತಿವ್ರತ್ಯವನ್ನು ಕಳೆದುಕೊಳ್ಳಲಿಕ್ಕೇ !

**ಸಹಿಸು** ಕಷ್ಟವನ್ನು ಕೊಂಚಕಾಲವೂ ಸಹಿಸಲಾರದವನು ಸುಖವನ್ನೂ ಬಹುಕಾಲ ಸಹಿಸಲಾರ.

**ಸಾಕು** ಸಾಕು ಎನ್ನಬಲ್ಲವನಿಗಿಂತಲೂ ಹೆಚ್ಚಿನ ಶ್ರೀಮಂತನಾರು ?

**ಸ್ವಾಗತ** ಸುಂದರ ಹೆಂಡತಿ ಉಳ್ಳವನಿಗೆ ಸ್ವಾಗತಕ್ಕೆ ಕೊರತೆಯೇ ? ಅವಿವೇಕಿ ಮಗನ ತಂದೆ ಸದಾ ಯಮನನ್ನೇ ಸ್ವಾಗತಿಸುತ್ತಾನೆ.

**ಸ್ವಾತಂತ್ರ್ಯ** ಅನಿಸಿದುದನ್ನು ಆಡುವ ಸ್ವಾತಂತ್ರ್ಯ ಪ್ರತಿಯೊಬ್ಬನಿಗೂ ಇದೆ - ಆಡಿದವನ ಹಲ್ಲನ್ನುದುರಿಸುವ ಹಕ್ಕು ಎಲ್ಲರಿಗೂ ಇದೆ ; ವಿವೇಕಿಯಾಗಿ ಸ್ತ್ರೀಯಳಿಗೆ ಸ್ವಾತಂತ್ರ್ಯ ಕೊಡುತ್ತಾನೆ - ತನ್ನ ಸ್ವಾತಂತ್ರ್ಯವು ಹೋಯಿತೆಂದು ಅವಿವೇಕಿಯಾಗಿ ಅಳುತ್ತಾನೆ. ಪ್ರತಿಯೊಂದು ಗಂಡಿಗೂ ಸ್ವಾತಂತ್ರ್ಯವಿದೆ — ತನ್ನ ಹೆಂಡತಿ ಹೇಳಿದಂತೆ ವರ್ತಿಸಲು ; ಸ್ವಾತಂತ್ರ್ಯವನ್ನು ಬರೀ ಪ್ರೀತಿಸಿದರೆ ಸಾಲದು - ಗೌರವಿಸಬೇಕು.

**ಸ್ವಾರ್ಥ** ಮನುಷ್ಯನನ್ನು ದುಡಿಯಲು ಹಚ್ಚುವ ಏಕಮಾತ್ರ ದೇವರು ; ಮೊದಲು ದೇಶಪ್ರೇಮ, ಸ್ವಾರ್ಥತ್ಯಾಗ , ನಂತರ ಸ್ವಾರ್ಥಪ್ರೇಮ, ದೇಶತ್ಯಾಗ.

**ಸ್ವಾರ್ಥಿ** ಗಂಡು ಹೆಂಣಿನ ಎರಡರಷ್ಟು ಸ್ವಾರ್ಥಿಯಾಗಿದೆ - ಇಲ್ಲದಿದ್ದಲ್ಲಿ ಹೆಂಣು ಗಂಡಿನ ನಾಲ್ಕರಷ್ಟು ಸ್ವಾರ್ಥಿಯಾಗುತ್ತಿತ್ತು.

**ಸಾಧ್ಯ** ಸೂರ್ಯ ಚಂದ್ರರನ್ನು ಹಿಡಿದು ತರಲು ಮಾನವನಿಗೆ ಸಾಧ್ಯವಿದ್ದಿದ್ದರೆ, ಹಳೆಯ ಮಂತ್ರಿಗಳ ಹಿಂದಿನ ಭಾವಮೈದುನಂದಿರ ಮನೆಯಲ್ಲಿ ಇಂದು ಸೂರ್ಯ ಚಂದ್ರರು ನೀರು ಹೊರುತ್ತ ಓಡಾಡಬೇಕಾಗಿತ್ತು.

**ಸಾನ** ದಿನಕ್ಕೆರಡು ಬಾರಿ ಸ್ನಾನ ಮಾಡುವ ಉತ್ತಮ ಕುಲಜರ ಬಾಯಲ್ಲಿ ಬಿದ್ದು 'ಸ್ನಾನ' ಶಬ್ದವು 'ಸಾನ' ವೆಂಬ ಅಧಮ ರೂಪ ತಾಳಿದೆ.

**ಸ್ಥಾನ** ಮಾನವನ್ನು ನೀನು ಕಾಯ್ದುಕೋ - ಸ್ಥಾನವನ್ನು ಮಾನವೇ ಕಾಯ್ದುಕೊಳ್ಳುತ್ತದೆ.

**ಸ್ಥಾನಭ್ರಷ್ಟ** ಸ್ಥಾನಭ್ರಷ್ಟನಾದ ಅಧಿಕಾರಿಯು ಸ್ತನಭ್ರಷ್ಟವಾದ ಮಗುವಿನಂತೆ.

**ಸಾಮರ್ಥ್ಯ** ಸಾಕಷ್ಟು ಸಾಮರ್ಥ್ಯವನ್ನು ಕೊಟ್ಟು ಇದನ್ನು ಇತರರ ಹಿತಕ್ಕೆ ಉಪಯೋಗಿಸಬೇಡ ಎಂದು ನೀವು ಹೇಳಿದರೆ ಅದನ್ನು ಅವನ ಮುಖಕ್ಕೆ ಬಿಸುಡಿ ಬಾ.

**ಸ್ವಾಮಿಗಳು** ಕ್ಷೌರಕ್ಕೆ ಕುಳಿತಿದ್ದ ತಿಮ್ಮನಿಗೆ ಸ್ವಾಮಿಗಳಿಂದ ತಕ್ಷಣ ಬರತಕ್ಕದ್ದೆಂದು ಕರೆ ಬಂದಿತಂತೆ. ಮತ್ತೇಕೆ ಎರಡೆರಡು ಬಾರಿ ಸ್ನಾನ, ಸ್ವಾಮಿಗಳ ದರ್ಶನದ ನಂತರ ಹೇಗೂ ಮಾಡಬೇಕು ಎಂದು ಕೂಡಲೇ ಹೊರಟ.

**ಸಾಲ** ಕಳವಿನಿಂದ ಬಂದ ಹಣದಿಂದ ಒಳಿತು ಆಗಿದ್ದರೂ, ಆಗಿರಬಹುದು - ಸಾಲದಿಂದ ಬಂದ ಹಣದಿಂದವಂತೂ ಆಗಲು ಸಾಧ್ಯವೇ ಇಲ್ಲ ; ಮಗುವಿನಂತಹುದು - ಚಿಕ್ಕದ್ದಿದ್ದಷ್ಟೂ ಚೀರುವುದು ಹೆಚ್ಚು ; ಸಾಲ ಮಾಡುವವನು ಸಾದಾ ಮೂರ್ಖ, ಸಾಲ ಮಾಡಿ ಸುಳ್ಳಾಡದವನು ಶತಮೂರ್ಖ ; ಸಾಲಂಕೃತ ಕನ್ಯಾದಾನ ಎಂದರೆ ಸಾಲ ಮಾಡಿ ಮಗಳ

ಮದುವೆ ಮಾಡುವುದು ; ಮಾನವ ವರ್ಗದಲ್ಲಿ ಎರಡೇ ಜಾತಿ - ಸಾಲ ಕೊಡುವವರು ಮತ್ತು ಸಾಲ ಬೇಡುವವರು, ಈ ಬೇಡುವವರಲ್ಲಿ ಮೂರು ಜಾತಿ - ಕೇಳುವ ಮುನ್ನ ಮರಳಿ ಕೊಡುವವರು, ಕೇಳಿದ ನಂತರ ಕೊಡುವವರು, ಕೇಳಿದರೂ ಕೊಡದವರು, ಈ ಕೊಡದವರಲ್ಲಿಯೂ ಎರಡು ಜಾತಿ - ಪುನಃ ಅದೇ ಮನುಷ್ಯನಲ್ಲಿಯೇ ಸಾಲಕ್ಕೆ ಹೋಗದವರು ಮತ್ತು ಹೋಗುವವರು, ಈ ಹೋಗುವವರ ಜಾತಿಯಲ್ಲಿ ಮತ್ತೆ ಎರಡು ಜಾತಿ - ಅವನಲ್ಲಿಯೇ ಸಾಲ ಪಡೆಯಲಾರದವರು ಮತ್ತು ತಪ್ಪದೆ ಪಡೆಯುವವರು, ಈ ಕಡೆಯ ಜಾತಿಗೆ ಸಾಲ ಕೊಡುವವನಿಗೆ ಕುಬೇರನೂ ಹಣವನ್ನು ಒದಗಿಸಲಾರ.

**ಸಾವು** ಕೊನೆಯ ಡಾಕ್ಟರು ; ಹುಟ್ಟಿದ ತಕ್ಷಣವೇ ಸಾವು ಆರಂಭವಾಗುತ್ತದೆ ; ಹೇಗೆ ಸಾಯಬೇಕು ಎಂಬುದನ್ನು ಅರಿತವನು ಜೀವನದಲ್ಲಿ ಅರಿಯಬೇಕಾದುದೆಲ್ಲವನ್ನೂ ಅರಿತಂತೆಯೇ ; ಸಾವು ಬಂದಾಗ ಹೇಗೆ ಸಾಯಲಿ ಎಂದು ಅಳುವವನು ಅಧಮ - ಸಾವು ದೂರವಿರುವಾಗ ಹೇಗೆ ಬದುಕಲಿ ಎಂದು ಅಳುವವನು ಅಧಮಾಧಮ ; ಸಾವಿಗೆ ಅಂಜದವರು ಅನೇಕರಿದ್ದಾರೆ - ಸಾವಿನ ಬರುವಿಕೆಗೆ ? ಸಾವಿನ ಬಳಿ ಪಂಚಾಂಗವಿಲ್ಲ ; ಸಾವು ಇದೆ ಎಂದೇ ಇಂದು ಬದುಕಿಗೆ ಬೆಲೆ ಬಂದಿದೆ ; ಸಾವು ಸಾಕು ಎನ್ನುವಷ್ಟು ಮಕ್ಕಳನ್ನು ಬ್ರಹ್ಮನು ಸೃಷ್ಟಿಸಲಾರ; ದೇಶದ ಸಲುವಾಗಿ ಸಾಯಲು ಧೈರ್ಯಬೇಕು - ಬದುಕಿರಲು ವಿವೇಕಬೇಕು ; ಬಾಳು ಎಂಬ ದೇಹಕ್ಕೆ ಸಾವೇ ಕಿರೀಟ ; ಆಯುಷ್ಯಿನ ಮೂರನೇ ಭಾಗವನ್ನು

ಮಾನವನು ನಿದ್ರೆಯಲ್ಲಿ ಕಳೆಯುತ್ತಾನೆ - ಅದೇಕೋ ಸಾವಿಗೆ ಅಂಜುತ್ತಾನೆ ; ಸಂಪತ್ತು ಕೇವಲ ಕೆಲವರಿಗೇ - ಸಾವು ? ದೊಡ್ಡ ಮನುಷ್ಯ ಸತ್ತರೆ ದೊಡ್ಡ ತಗ್ಗು ಬೇಕು ; ದೇವನ ಅತ್ಯದ್ಭುತ ಚಮತ್ಕಾರವೇ ಇದು - ಬಾಳಿನ ಮಧ್ಯದಲ್ಲಿಡದೆ ಸಾವನ್ನು ಅದೆಲ್ಲಿಯೋ ಕೊನೆಯಲ್ಲಿ ಇಕ್ಕಿದ್ದಾನೆ ; ಕೊಲ್ಲುತ್ತೇನೆ ಎಂದು ಅಂಜಿಸುವವನು ಕೊಂದಾನು - ಸಾಯುತ್ತೇನೆ ಎಂದು ಬೆದರಿಸುವವಳು ಸಾಯುವುದುಂಟೆ ? ಮಗನು ಬೆಳೆಯುತ್ತಿದ್ದಾನೆ ಎಂದು ತಾಯಿ ತಿಳಿಯುತ್ತಾಳೆ - ಅವನು ಸಾವಿನ ಸಮೀಪ ಬರುತ್ತಿದ್ದಾನೆಂಬುದನ್ನು ಅವಳೇನು ಬಲ್ಲಳು, ಪಾಪ ! ಸಾವು ಮತ್ತು ಪ್ರಣಯ ದೇವನಿತ್ತ ರೆಕ್ಕೆಗಳು - ಎರಡೂ ಸ್ವರ್ಗಕ್ಕೆ ಒಯ್ಯುತ್ತವೆ ; ನನಿಯದವರ ಸಾವಿನಿಂದ ಬಂದ ದುಃಖವೂ ಸಾಯುತ್ತದೆ.

**ಸಾವುಕಾರ** ಸಾವಂ ಕರೋತಿ ಇತಿ ಸಾವುಕಾರ.

**ಸಾವಿತ್ರಿ** ಮೂರುಬಾರಿ ಸಾಯುವವಳು-ಹುಟ್ಟಿದಾಗ, ತಾಳಿಯನ್ನು ಕಟ್ಟಿದಾಗ ಮತ್ತು ಕಿವಿಗೆ ಬಿಗಿದಾಗ: ಜೀವವಿಮೆ ಇಳಿಸದೆ ಸತ್ತು ಪಾರಾಗಿ ಯಮನ ಹಿಂದೆ ಬಚ್ಚಿಕ್ಕಿಗೊಂಡಿದ್ದ ಗಂಡನನ್ನು ಹಿಡಿದು ಎಳೆದು ತಂದ ಮಹಾಗಠಾಣಿ ಹೆಂಣು.

**ಸ್ವಾಸ್ತಿಕ** ದೇವನಿದ್ದಾನೆ ಎನ್ನುವವ ಆಸ್ತಿಕ, ಇಲ್ಲ ಎನ್ನುವವ ನಾಸ್ತಿಕ, ನಾನೇ ದೇವ ಎನ್ನುವವ ಸ್ವಾಸ್ತಿಕ-ಹಿಟ್ಲರ !

**ಸಾಹಸ** ಸಾಯುವುದು ಸಾಹಸದ ಕೆಲಸ-ಬಾಳುವುದು ಬಹು ಸಾಹಸದ ಕೆಲಸ.

**ಸಾಹಿತ್ಯ** ಸಾಹಿತ್ಯದಲ್ಲಿ ಎರಡು ಬಗೆ, ಶಾಶ್ವತ ಸಾಹಿತ್ಯ ಮತ್ತು ಅಶಾಶ್ವತ ಸಾಹಿತ್ಯ-ಕ್ಯಾಲಿಕೊ ಬೈಂಡು, ಸಾದಾ ಬೈಂಡು: ಸಂಗೀತಗಾರನಿಗೆ ಅರ್ಥವಾಗಲಾರದುದೇ ಸಾಹಿತ್ಯ.

**ಸಾಹಿತಿ** ಇನ್ನೊಬ್ಬ ಸಾಹಿತಿ ಬರೆದುದನ್ನೆಂದೂ ಓದದವ, ಓದಿದರೂ ಮೆಚ್ಚದವ, ಮೆಚ್ಚಿದರೂ ಹೇಳದವ:ತನ್ನ ಹುಚ್ಚಿಗೆ ಮೆಚ್ಚಿದವರನ್ನು ಮಾತ್ರ ಜಾಣರೆನ್ನುವವ: ಸಾಹಿತಿಗಳು ಬಡವರಾಗಿರುವುದಕ್ಕೆ ಒಂದೇ ಕಾರಣ-ಬರೀ ಬಡವರೆ ಸಾಹಿತ್ಯಕ್ಕೆ ಗಂಟು ಬಿದ್ದಿರುವುದು: ಸಾಹಿತಿಗೆ ತಿಂಮನದೊಂದೇ ಸಲಹೆ-ಬರೆಯುವುದನ್ನು ನಿಲ್ಲಿಸು, ಬುದ್ಧಿಯು ತಾನೇ ಓಡುತ್ತದೆ:ಸಾಹಿತಿಗೆ ಸರಸ್ವತಿಯ ಕೃಪೆಯು ಹೇರಳವಾಗಿ ಒದಗುವುದು ಗ್ರಂಥರಚನೆಯ ಕಾಲದಲ್ಲಿ ಅಲ್ಲ-ತನ್ನ ಗ್ರಂಥದ ಬಗ್ಗೆ ಹೇಳಿಕೊಳ್ಳುವಾಗ: ಸಾಹಿತಿಯು ಆಹಾರ ಮಂತ್ರಿಯಾದರೆ ಅನ್ನದ ಕೊರತೆಯೇ ಇಲ್ಲ-ಪ್ರಜೆ ಪುಸ್ತಕಗಳನ್ನು ತಿನ್ನಲು ಮಾತ್ರ ಸಿದ್ಧವಾಗಬೇಕು: ತನ್ನ ಮಕ್ಕಳ ಗುಣ ವರ್ಣನೆ ಮಾಡಲು ಒಬ್ಬ ತಾಯಿ ಸುರುಮಾಡಿದಳು, ಇದಿರು ಕುಳಿತವರೆಲ್ಲರೂ ತೂಕಡಿಸಲಾರಂಭಿಸಿದರು-ತನ್ನ ಪುಸ್ತಕದ ವರ್ಣನೆ ಸುರುಮಾಡಿದ ಒಬ್ಬ ಸಾಹಿತಿ, ಎಲ್ಲರೂ ಗೊರಕೆ ಹೊಡಿದರು:ಚಹಾ ಬೇಕಾದರೆ ಧಾರವಾಡದ ಸಾಹಿತಿಯನ್ನು ಹೊಗಳಿ, ಕಾಫಿ ಬೇಕಾದರೆ ಬೆಂಗಳೂರು ಸಾಹಿತಿಯನ್ನು ಬೈಯಬೇಕು, ತಲೆನೋವು ಬೇಕಾದರೆ ಮಂಗಳೂರ ಸಾಹಿತಿಯನ್ನು ಮಾತನಾಡಿಸು; ಸಾಹಿತಿ ಸತ್ತಕೂಡಲೆ ಸ್ವರ್ಗಕ್ಕೆ ಹೋಗುತ್ತಾನೆ-ಇನ್ನೊಬ್ಬ ಸಾಹಿತಿ ಸೇರಿದ ತಕ್ಷಣವೆ ಸ್ವರ್ಗವು ನರಕವಾಗುತ್ತದೆ: 'ನನ್ನ ಮುಂದಿನ ಗ್ರಂಥವು

ನನ್ನೆಲ್ಲ ಕೃತಿಗಳಲ್ಲಿ ಅತ್ಯುತ್ತಮವಾದುದು' ಎಂದು ಆಸುಗಾಲವೂ ಹೇಳುವವನು.

**ಸಾಕ್ಷಿ** ಇಂದು ಕದ್ದು ಮಾಡಿದ ಕೆಲಸಕ್ಕೆ ಸಾಕ್ಷಿಗಳೇ ಇಲ್ಲವಲ್ಲ ಎಂದು ನಾಳೆಯೇ ಅಳಬೇಕಾಗುತ್ತದೆ.

**ಸಿಗರೇಟು** ಸದ್ಬ್ರಾಹ್ಮಣ ಕುಲಕ್ಕೆ ಸೇರಿದುದು-ದಹನವೇ ಇದಕ್ಕೆ ಅಂತ್ಯ ಸಂಸ್ಕಾರ: ನಶ್ಯ ಬ್ರಾಹ್ಮಣೇತರ- ಮೂಗಿನಲ್ಲಿ ಇದರ ಗೋರಿ: ತಂಬಾಕು ಬಾಯಿಗಾಣದಲ್ಲಿ ಸಿಕ್ಕು ದುರ್ಮರಣಕ್ಕೆ ಈಡಾಗುತ್ತದೆ: ಸಿಗರೇಟಿನಲ್ಲಿ ಎರಡು ಗುಣಗಳಿವೆ-ಇದ್ದಾಗ ಆಮೇಲೆ ಸೇದು ಎನ್ನುತ್ತದೆ. ಇಲ್ಲದಾಗ ಈಗಲೇ ಸೇದು ಎನ್ನುತ್ತದೆ: ಮನಸ್ಸಿಗೆ ಬೇಸರವಾದಾಗ ಹೆಣ್ಣು ಅಳುತ್ತದೆ-ಗಂಡು ಸಿಗರೇಟು ಎಳೆಯುತ್ತದೆ: ಒಂದು ತುದಿಗೆ ಬೆಂಕಿ, ಇನ್ನೊಂದು ತುದಿಗೆ ಮೂರ್ಖ- ಸಹಿಸಲಾರದೆ ಸಿಗರೇಟು ಸುಟ್ಟುಗೊಂಡು ಬೂದಿಯಾಗುತ್ತದೆ.

**ಸಿಟ್ಟು** ವಾದದಲ್ಲಿ ಗೆಲ್ಲಲಾರದವನಿಗೆ ಸಿಟ್ಟೇ ಗತಿ; ಸಿಟ್ಟು ಬಂದಾಗ ಪತ್ರವನ್ನು ಬರೆದಿಡು-ಸಮಾಧಾನವಾದ ಮೇಲೆ ನೀನೇ ಹರಿದು ಹಾಕುತ್ತಿ.

**ಸಿದ್ಧಾಂತಿ** ಸಿದ್ಧವಾದ ದಂತ ಉಳ್ಳವನೇ ಸಿದ್ಧಾಂತಿ - ಹಲ್ಲು ಕಟ್ಟಿಸಿಕೊಂಡವನು.



**ಸಿನೆಮಾ** ಬೆಳಕಿನಲ್ಲಿ ಗಳಿಸಿದ ಹಣವನ್ನು ಕತ್ತಲಲ್ಲಿ ಖರ್ಚು ಮಾಡಿಸುವುದು.

**ಸಿಲೋನು** ಚಹದಂಗಡಿ, ನಡುರಸ್ತೆ, ಸಲೂನುಗಳಲ್ಲಿ ಸದಾ ಇರುವ ರೇಡಿಯೋ ಗಲಾಟೆ.

**ಸಿಹಿ** ಸಹನೆ ಉಳ್ಳವನಿಗೆ ಕಹಿಯೂ ಸಿಹಿಯೇ.

**ಸ್ತ್ರೀ** ಸ್ತ್ರೀಯರಲ್ಲಿ ದೇವನು ಕುರೂಪಿಗಳನ್ನು ಸೃಷ್ಟಿಸಲಿಲ್ಲ - ಸುರೂಪಿಯಾಗಿ ಕಾಣಲು ಕೆಲವರಿಗೆ ಕಲಿಸಲಿಲ್ಲ ಅಷ್ಟೇ ; ದೇವನ ಅತ್ಯುತ್ತಮವಾದ ಸೃಷ್ಟಿ ಉತ್ತಮ ಸ್ತ್ರೀ - ಅತಿ ನೀಚವಾದ ಸೃಷ್ಟಿ ನೀಚ ಸ್ತ್ರೀ ; ಸ್ತ್ರೀಗೆ ಸಹಾನುಭೂತಿ ತೋರುವುದೆಂದರೇನು - ಕೆರೆಯ ಮುಂದೆ ಅರವಟ್ಟಿಗೆ ಇಟ್ಟಂತೆಯೇ ; ಪುರುಷನಿಗೆ ಅವನ ಬಲವೇ ಅವನ ಸೌಂದರ್ಯ - ಸ್ತ್ರೀಯಳಿಗೆ ಅವಳ ಸೌಂದರ್ಯವೇ ಅವಳ ಬಲ ; ಸ್ತ್ರೀಯರಲ್ಲಿ ಮೂರ್ಖರೇ ಹೆಚ್ಚು - ಅವರೂ ಪುರುಷರ ಮಟ್ಟಕ್ಕೇ ಬರಲೆಂದು ದೇವನ ಇಚ್ಛೆ ; ಚಿನ್ನವನ್ನು ಬೆಂಕಿಯಿಂದ, ಸ್ತ್ರೀಯನ್ನು ಚಿನ್ನದಿಂದ, ಪುರುಷನನ್ನು ಸ್ತ್ರೀಯಿಂದ ಪರೀಕ್ಷಿಸು ; ಪುರುಷ ಹೃದಯವನ್ನು ಅರಿತಷ್ಟು ಸುಲಭವಾಗಿ ಸ್ತ್ರೀ ಹೃದಯವನ್ನು ಅರಿಯಲು ಸಾಧ್ಯವಿಲ್ಲ-ಇದಕ್ಕೆ ಪುಷ್ಕಳವಾದ ಮಾಂಸದ ಹೊದಿಕೆ ಇದೆ. ಗಲಾಟೆ ಮಾಡುವವರನ್ನು ಪೋಲೀಸರ ಕೈಗೆ ಕೊಡಲಾಗುವುದು - ಗಲಾಟೆ ಮಾಡುವ ಪೋಲೀಸರನ್ನು ಸ್ತ್ರೀಯರ ಕೈಗೆ ಕೊಡಲಾಗುವುದು ? ತಾನೇ ಕೇಳಿದುದನ್ನು ನಂಬುವುದಿಲ್ಲ - ತಾನು ತಿಳಿದುದನ್ನೇ ನಂಬುತ್ತಾಳೆ. ದೇವನು ಸೃಷ್ಟಿಸಿದಂತೆ ಸ್ತ್ರೀ- ಸ್ತ್ರೀ ಇಟ್ಟಂತೆ ಪುರುಷ ; ಸ್ತ್ರೀಯು ನಿನ್ನ ತೋಳಲ್ಲಿ ಸಿಕ್ಕಿದ್ದಾಳೆಂದು ಸಂತೋಷಿಸಬೇಡ - ನೀನೇ ತೋಳದ ಬಾಯಲ್ಲಿ ಸಿಕ್ಕುಬಿದ್ದಿರುವಿ. ಒಂದು ಬೆತ್ತ, ಒಂದು ಕರವಸ್ತ್ರವಿಲ್ಲದೆ ಸ್ತ್ರೀಯ ಬಳಿ

ಹೋಗಬೇಡ - ಅದು ಹೊಡೆಯಲಿಕ್ಕೆ, ಇದು ಕಣ್ಣೊರೆಸಲಿಕ್ಕೆ ; ಸುಂದರ ಸ್ತ್ರೀಯು ಬಡವಿಯಾದರೆ, ಪ್ರಮಾದವನ್ನು ತಪ್ಪಿಸಲು ಇಬ್ಬರು ದೇವರುಗಳಾದರೂ ಬೇಕು - ಸೌಂದರ್ಯವು ಪುರುಷನನ್ನು ಎಳೆಯುತ್ತದೆ, ಬಡತನವು ಸ್ತ್ರೀಯನ್ನು ದೂಡುತ್ತದೆ ; ಸುಂದರ ಸ್ತ್ರೀಯು ನಗುತ್ತಾಳೆ - ಹಣದ ಚೀಲವು ಅಳುತ್ತದೆ.

**ಸೀಟಾ** ಆಧುನಿಕ ಸೀತಾ.



**ಸೀತಾ** ಸೀ ತಾ - ಸಿಹಿ ಕೊಡು.

**ಸೀಸ ಪದ್ಯ** ಸೆರೆ ಕುಡಿದು ಸೀಸೆ ಬರಿದುಮಾಡಿದ ನಂತರ ಬರೆದ ಪದ್ಯವೇ ಸೀಸ ಪದ್ಯ.

**ಸುಖ** ಸರ್ವೇ ಜನಾಃ ಸುಖಿನೋ ಭವಂತು - ಸರ್ವೇ
ಖಾತೆಯವರು ಮಾತ್ರವೇ ಸುಖವಾಗಿದ್ದರೆ, ಸೆಟಲ್
ಮೆಂಟಿನವರು ಹಾಳಾಗಬೇಕೆ ? ಸುಖ, ಸಂಕಷ್ಟ,
ಎರಡೂ ಒಂದೇ ಗಿಡದ ಹಣ್ಣುಗಳು - ಒಂದು
ಹುಳಿ, ಇನ್ನೊಂದು ಸಿಹಿ, ಇಪ್ಪತ್ತನೇ ವಯಸ್ಸಿನಲ್ಲಿ
ಮನುಷ್ಯನು ಸುಖವನ್ನು ಗುಳು ಗುಳು
ನುಂಗುತ್ತಾನೆ. ಮೂವತ್ತಕ್ಕೆ ಅಗಿದು ತಿನ್ನುತ್ತಾನೆ,
ನಲವತ್ತಕ್ಕೆ ನಾಲಗೆಯ ಮೇಲಿಕ್ಕಿ ರುಚಿಸುತ್ತಾನೆ,
ಐವತ್ತಕ್ಕೆ ಹಲ್ಲಿಲ್ಲವೆಂದು ಗೋಳಾಡುತ್ತಾನೆ,
ಅರವತ್ತಕ್ಕೆ ಸುಖದಲ್ಲೇನು ಇದೆ, ಮಣ್ಣು ಎಂದು
ಅಲ್ಲಗಳೆಯುತ್ತಾನೆ. ಸುಖಪಡುವುದರಿಂದ ದೇಹದ
ದಾಹವು ಶಾಂತವಾಗುವುದಿಲ್ಲ - ಸುಖವನ್ನು
ಬಿಡುವುದರಿಂದಲೂ ಆಗುವುದಿಲ್ಲ ; ದುಃಖವೆಂಬ
ಮಹಾ ವೃಕ್ಷದ ಬೀಜವೇ ಸುಖದ ದಾಹ ;
ಅವನೊಬ್ಬನೇ ನಿತ್ಯಸುಖಿ - ತಾನು
ಸುಖವಾಗಿದ್ದೇನೆಂದು ತಿಳಿದವನು ; ತನ್ನಲ್ಲಿ
ಇಲ್ಲದಿದ್ದರೂ ಇತರರಿಗೆ ಕೊಡಲು ಬರುವ ಒಂದೇ
ಒಂದು ವಸ್ತು - ಸುಖ ; ಗಂಡ, ಹೆಂಡತಿ ಈ
ಇಬ್ಬರಲ್ಲಿ ಒಬ್ಬರು ವಿವೇಕಿಯಾದರೂ ಸಾಕು -
ಇಬ್ಬರಿಗೂ ಸುಖವು ಲಭಿಸುತ್ತದೆ ; ಗಂಡಿಗೆ ಸುಖವು
ಲಭಿಸುವುದು ಆಯುಸ್ಸಿನಲ್ಲಿ ಎರಡೇ ಬಾರಿ - ಹೆಣ್ಣು
ತನ್ನ ಕೈಗೆ ಸಿಕ್ಕಾಗ, ಮತ್ತು ಆ ಹೆಣ್ಣಿನ ಕೈಯಿಂದ
ತಾನು ಪಾರಾದಾಗ ; ಸುಖದ ಎಲ್ಲ ದಾರಿಗಳೂ
ಸುಡುಗಾಡಿಗೆ ಬಂದು ನಿಲ್ಲುತ್ತವೆ ;
ಮದುವೆಯಾಗುವವರೆಗೂ ಸುಖವೇನೆಂಬುದು ತಿಳಿ
ಯುವುದಿಲ್ಲ. ಅನಂತರ ಉಳಿಯುವುದಿಲ್ಲ ; ಸುಖ
ವನ್ನು ಗಳಿಸಿಕೊಳ್ಳಲು ಕಷ್ಟಪಡಬೇಕು, ಉಳಿಸಿ
ಕೊಳ್ಳಲೂ ಕಷ್ಟಪಡಬೇಕು. ಕಳೆದುಕೊಂಡರಂತೂ

ಕಡೆಯುವರೆಗೂ ಕಷ್ಟಪಡುತ್ತಲೇ ಇರಬೇಕು - ಇನ್ನು ಸುಖಪಡುವುದಾವಾಗ? ಸುಖದಲ್ಲಿ ಬೇಸರ ವಾಗುವಷ್ಟು ಏಕರೂಪತೆ ಇದೆ - ಕಷ್ಟದಲ್ಲಿ ಬೇಕಾದಷ್ಟು ವೈವಿಧ್ಯತೆ ಇದೆ ; ಸುಖಕ್ಕಾಗಿ ಬಲೆ ಹಿಡಿದು ಕೂಡಬೇಡ - ಬಲೆ ಬೀಸಿ ಅದೇ ಅಲ್ಲಲ್ಲಿ ಕುಳಿತಿರುತ್ತದೆ ; ಸುಖವಾಗಿರುವುದರಲ್ಲಿ ಸುಖವಿಲ್ಲ - ಸುಖವಾಗಿದ್ದೇನೆಂದು ಸುಖವಿಲ್ಲದವರಿಗೆ ಹೇಳುವುದರಲ್ಲಿ ಸುಖವಿದೆ ; ಸುಖದ ಬೆನ್ನು ಹತ್ತುವವನು ಒಂದೇ ಒಂದು ಚಿಕ್ಕ ತಪ್ಪನ್ನು ಮಾಡುತ್ತಾನೆ - ಸುಖವು ದೊರೆಯಿತು ಎಂಬುದನ್ನೇ ಅರಿಯದೆ ಮುಂದೆ ಓಡುತ್ತಲೇ ಇರುತ್ತಾನೆ.

**ಸುಖಿ** ಗಂಡನ ಬಗ್ಗೆ ತಿಳಿದುಕೊಳ್ಳಬೇಕಾದುದನ್ನೆಲ್ಲಾ ತಿಳಿದ ಮಾತ್ರಕ್ಕೆ ಹೆಂಡತಿ ಸುಖಿಯಲ್ಲ - ತಿಳಿಯಬಾರದುದನ್ನು ತಿಳಿಯದಿದ್ದರೇ ಸುಖಿ.

**ಸುಗುಣಿ** ನಿರ್ಗುಣೆಯ ಹೆಂಡತಿ ಮತ್ತು ದುರ್ಗುಣಿಯ ಗಂಡ

**ಸುಡುಗಾಡು** ಸ್ವರ್ಗ ನರಕಗಳೆರಡಕ್ಕೂ ಇರುವ ಏಕಮಾತ್ರ ಮಹ ದ್ವಾರ ; ಹರಿಶ್ಚಂದ್ರ ಮಹಾರಾಜನ ಅಠಾರಾ ಕಛೇರಿ.

**ಸುದ್ದಿಗಾರ** ಸುದ್ದಿಗಾರರಲ್ಲಿಯೂ ಎರಡು ಜಾತಿ - ಸುಳ್ಳು ಸುದ್ದಿಗಾರರು ಮತ್ತು ಸ್ವಂತ ಸುಳ್ಳು ಸುದ್ದಿಗಾರರು ; ಸುದ್ದಿಯನ್ನು ತಂದ ಮಾತ್ರಕ್ಕೆ ಅವನು ಸುದ್ದಿಗಾರನಾಗಲಿಲ್ಲ - ಸುದ್ದಿಯನ್ನು ಹುಟ್ಟಿಸಿ ತರಬೇಕು.

**ಸುಧಾಮ** ಅವಲಕ್ಕಿಯೇ ಸುಧಾಮನನ್ನು ದೊಡ್ಡವನನ್ನು ಮಾಡಿತು.

**ಸುಧಾರಣೆ** ಜಗತ್ತಿನ ಸುಧಾರಣೆ ನನ್ನಿಂದಲೇ ಆಗಬೇಕು ಎನ್ನು ತ್ತಾನೆ, ತನ್ನ ಮದುವೆಯಾಗುವವರೆಗೂ - ಜಗತ್ತಿನ

ಸುಧಾರಣೆ ಮಾಡುವುದು ಬ್ರಹ್ಮನಿಂದಲೂ ಆಗದು ಎಂಬುದು ಅರ್ಥವಾಗುತ್ತದೆ ಮದುವೆಯಾದ ನಂತರ.

**ಸುಮ್ಮನಿರು** ಅನುಗಾಲವೂ ಮಾತನಾಡುವವನೊಬ್ಬನೇ ಅಲ್ಲ ಬೇಸರವನ್ನು ತರಿಸುವುದು - ಅನುಗಾಲವೂ ಸುಮ್ಮನಿರುವವನೂ ಅದೇ ಉಪಕಾರವನ್ನು ಮಾಡುತ್ತಾನೆ.

**ಸುಲಭ** ನನಗೆ ಸುಲಭವಾದ ಕೆಲಸವು ಬೇಕು ಎನ್ನುವುದೊಂದೆ ಸುಲಭ - ದೊರೆತ ನಂತರ ಆ ಸುಲಭದ ಕೆಲಸವನ್ನು ಮಾಡುವುದೂ ಕಷ್ಟವಾಗುತ್ತದೆ ಅವನಿಗೆ.

**ಸುವ್ಯಭಿಚಾರಿ** ಸುವ್ಯಭಿಚಾರಿಗೆ ಸೂಳೆ ಇಲ್ಲ - ತಾನು ಮುಟ್ಟಿದವರೆಲ್ಲ ತನ್ನ ಮಡದಿಯರು, ಅಲ್ಲಿ ಹುಟ್ಟಿದವರೆಲ್ಲ ತನ್ನ ಮಕ್ಕಳು.

**ಸುಸಂಸ್ಕೃತ** ಇತರರ ತಪ್ಪಿಗಾಗಿ ತಾನು ನೋವು ಪಡುವವನು ; ಕಲಿಯಬೇಕಾದುದನ್ನು ತನ್ನ ಸೇವಕನಿಂದಲೂ ಕಲಿಯುವವನು.

**ಸುಳ್ಳು** ಹೆಂಡತಿ ಗಂಡನನ್ನು ಪ್ರಶ್ನಿಸುವುದನ್ನು ಬಿಟ್ಟರೆ ಜಗತ್ತಿನಲ್ಲಿ ಸುಳ್ಳುಗಳು ಅರ್ಧ ಕಡಿಮೆಯಾಗುತ್ತವೆ ; ಸತ್ಯವನ್ನು ಶಿಂಗರಿಸಿದರೆ ಅದೇ ಸುಳ್ಳು ಆಗುತ್ತದೆ; ಸುಳ್ಳಾಡುವುದೇನು ಸುಲಭದ ಕೆಲಸವಲ್ಲ - ಬಹು ಒಳ್ಳೆಯ ಜ್ಞಾಪಕಶಕ್ತಿಯು ಅತ್ಯವಶ್ಯವಾಗಿ ಬೇಕು. ಸುಳ್ಳನ್ನಾಡಿದ ಪಾಪ ಸುಳ್ಳನ್ನಾಡಿಸಿದವರ ತಲೆಯ ಮೇಲೆ ಉದಾ : ಮಕ್ಕಳು ಸುಳ್ಳಾಡಿದರೆ, ಮಾಸ್ತರನಿಗೆ ನರಕ, ಸೂಳೆ ಸುಳ್ಳಾಡಿದರೆ ಸಮಾಜಕ್ಕೆ ಶಿಕ್ಷೆ ; ಬೇಡಾದವರು ಆಡುವ ಸತ್ಯವೂ ನಮಗೆ ಸುಳ್ಳು, ಹೆಂಡತಿಗೆ ನೋವು ಕೊಡಲಾರದ ಒಳ್ಳೆಯ

ಗಂಡ ಹೆಚ್ಚು ಸುಳ್ಳಾಡುತ್ತಾನೆ. ಸುಳ್ಳುಗಳಲ್ಲಿಯೂ ಎರಡು ಬಗೆ - ಸುಳ್ಳು ಮತ್ತು ಅಂಕಿ ಸಂಖ್ಯೆಗಳು ; ಸುಳ್ಳು ಸತ್ಯದೊಟ್ಟಿಗೆ ಹೊಂದಿಕೊಳ್ಳುವುದಿಲ್ಲ - ಇನ್ನೊಂದು ಸುಳ್ಳಿನೊಟ್ಟಿಗೂ ಹೊಂದಿಕೊಳ್ಳುವುದಿಲ್ಲ, ಸುಳ್ಳನ್ನೂ ಆಡುತ್ತೇನೆ, ತಲೆ ಎತ್ತಿಯೂ ತಿರುಗುತ್ತೇನೆ ಎಂದರಾಗದು - ವಕೀಲನಾಗದಿದ್ದರೆ ; ಸುಳ್ಳು ಕೇಳಿದವರಕ್ಕಿಂತಲೂ ಹೇಳಿದವರೇ ಹೆಚ್ಚು ; ನಿನ್ನನ್ನು ಉಳಿಸಲು ಅವನು ಸುಳ್ಳಾಡಿದನೆಂದು ಮೆಚ್ಚಬೇಡ - ನಿನ್ನನ್ನು ಉಳಿಸಲು ಅವನೇ ಸುಳ್ಳಾಡುತ್ತಾನೆ ; ಸುಳ್ಳಾಡುವವನು ಇಡೀ ಜಗತ್ತನ್ನೇ ಸುತ್ತ ಬಲ್ಲ - ಮನೆಗೆ ಮಾತ್ರ ಮರಳಿ ಬರಲಾರ ; ಎಲ್ಲರೂ ನಂಬಿರುವ ಮಾತು ಸಾಮಾನ್ಯವಾಗಿ ಸುಳ್ಳಿರುತ್ತವೆ ; ಸುಳ್ಳನ್ನಾಡುವುದಕ್ಕಾಗಿಯೇ ಕೆಲವು ಹೆಣ್ಣು ಹುಟ್ಟಿದವು - ಅವನ್ನು ನಂಬುವುದಕ್ಕಾಗಿ ಹಲವು ಗಂಡು ಹುಟ್ಟಿದವು ; ಸುಳ್ಳನ್ನು ಕೇಳಲಾರೆ ಎನ್ನುವವನು ಕಿವಿಯನ್ನು ಮುಚ್ಚಿಕೊಳ್ಳುವ ಬದಲು ಬಾಯಿಯನ್ನೇ ಮುಚ್ಚಿಕೊಳ್ಳುವುದು ಮೇಲು ; ಸುಳ್ಳಿಗೆ ಸತ್ಯದ ಬಣ್ಣವನ್ನು ಕೊಡಲು ಆರಂಭಿಸಿದವನು ಕೊನೆಯಲ್ಲಿ ಸತ್ಯಕ್ಕೆ ಸುಳ್ಳಿನ ಬಣ್ಣವನ್ನು ಬಳಿದು ಕೂಡುತ್ತಾನೆ.

**ಸುಳ್ಳುಕೆಮ್ಮು** ಸಂಗೀತಗಾರನ ಸ್ವಂತ ಪಕ್ಕವಾದ್ಯ.

**ಸೂರ್ಯ** ಕತ್ತಲಾದ ಮೇಲೆ ಹೊರಬರಲು ಅಂಜುವ ಹೇಡಿ : ಒಂದು ಗೂಬೆಯನ್ನೂ ಕಾಣದ ಪಾಪಿ ; ಹಗಲಿನ ಬೆಳಕಿನಲ್ಲಿ ಮಾತ್ರವೇ ಹೊರಬರುವ 'ಹೀರೋ' ; ದಿಕ್ಕಿಲ್ಲದವನಿಗೆ ಇವನೇ ದಿಕ್ಕು - ಹಗಲಿನಲ್ಲಿ ; ಸೂರ್ಯನ ಬಲವು ಕೇವಲ 'ಸೆವೆನ್ ಹಾರ್ಸ ಪವರಿನಷ್ಟು' ; ದೇವನ ಗಡಿಯಾರ - ಮೋಡ

'ಪ್ರೂಫ್' ಅಲ್ಲ, ಕೋಳಿ ಕೂಗುವುದನ್ನು ಕೇಳಲು ಅವಸರದಲ್ಲಿ ಎದ್ದು ಅಲ್ಲಿಂದ ಇಳಿದು ಬರುವವನು.

**ಸೂರ್ಯವಂಶಜ** ಸೂರ್ಯನು ಹುಟ್ಟಿದನಂತರ ಹಾಸಿಗೆಯಿಂದ ಏಳುವವರೆಲ್ಲ ಸೂರ್ಯ ವಂಶಜರು.

**ಸೂಳೆ** ನವಿಧವಾ ; ಸೂಳೆಯಂತೆ ಕಾಣುವವರೆಲ್ಲ ಸೂಳೆಯರೇ ಇರಬಹುದು. ಗರತಿಯರಂತೆ ಕಾಣುವವರೆಲ್ಲ ಗರತಿಯರೆ ? ಅವಿವಾಹಿತ ಹೆಂಡತಿ ; ಸೂಳೆಗೆ ಮುಪ್ಪು ಬಂದ ಮಾತ್ರಕ್ಕೆ ಅವಳಿಗೆ ಯಾರೂ ಅಮ್ಮ ಎನ್ನುವುದಿಲ್ಲ, ಅತ್ತೆ ಎನ್ನುತ್ತಾರೆ ಅಷ್ಟೆ ; ಸೂಳೆಯ ಬಳಿ ಸ್ವರ್ಗವನ್ನು ಕಂಡವನು, ನರಕವನ್ನು ಕಾಣಲು ಸಾಯುವವರೆಗೂ ಕಾಯಬೇಕಿಲ್ಲ ; ಸುಖವು ಬೇಕು, ಮಕ್ಕಳು ಬೇಡ ಎನ್ನುವ ಗರತಿ ಕೆಟ್ಟ ಸೂಳೆ-ಸುಖವೂ ಬೇಕು, ಮಕ್ಕಳೂ ಬೇಕು, ಎನ್ನುವ ಸೂಳೆ ಒಳ್ಳೆಯ ಗರತಿ.

**ಸೆಟ್ಟಿ** ಎತ್ತು ಈಯಿತು ಅಂದರೆ, ಗಿಂಣ ನನಗೆ ಎನ್ನುವವನೇ ಸೆಟ್ಟಿ.

**ಸೆರೆ** ಅಮೃತ ಸಮಾನವಾದ ವಿಷ ; ಹೊಟ್ಟೆಯಲ್ಲಿ ಸೆರೆ ಹೋಗುತ್ತದೆ - ಬುದ್ಧಿ ರಜೆ ಪಡೆಯುತ್ತದೆ. ಸೆರೆ ಕುಡಿದವನ ಬಾಯಿಯ ವಾಸನೆಗಿಂತಲೂ ಸೆರೆಯ ವಾಸನೆ ಸಾವಿರ ಪಾಲು ಮೇಲು ; ಸೆರೆ ಕುಡಿದು ಅನೇಕರು ಸತ್ತಿದ್ದಾರೆ. ನೀರು ಕುಡಿದವರೆಲ್ಲ ಚಿರಂಜೀವಿಯರೆ ? ಸೆರೆ ಕುಡಿಯಲು ಎರಡೇ ಕಾರಣಗಳು -ಕುಡಿಯಬೇಕೆನಿಸುವುದು ಒಂದು, ಬೇರೆ ಇನ್ನೊಂದು ಯಾವುದಾದರೂ ; ಸುಖವಾಗಿರುವವನಿಗೆ ಸೆರೆಯ ಅವಶ್ಯಕತೆ ಇಲ್ಲ - ದುಃಖಿಗೆ ಸೆರೆಯಿಂದ ಸುಖವು ದೊರೆಯುವದಿಲ್ಲ. ಒಳ್ಳೆಯ ಸೆರೆ ಬೇಕಾದರೆ ಅಂಗಡಿಗೆ ಹೋಗಬೇಡ ;

ಗುಟ್ಟಾಗಿ ಕುಡಿಯುವ ಸಾಧು ಸನ್ಯಾಸಿ, ಗುರುಗಳು, ಪಾನನಿರೋಧ ಖಾತೆಯ ಅಧಿಕಾರಿಗಳು, ನೀತಿ ಬೋಧಕರು ಮುಂತಾದ ಮಹಾನುಭಾವರನ್ನು ಕೇಳು; ಏನು ಕುಡಿಯುತ್ತಿ, ಯಾವಾಗ ಕುಡಿಯುತ್ತಿ, ಎಲ್ಲಿ ಕುಡಿಯುತ್ತಿ, ಎಂಬುದು ದಡ್ಡ ಪ್ರಶ್ನೆ - ಯಾರೊಡನೆ ಸೆರೆಯನ್ನು ಕುಡಿಯುತ್ತಿ ಎನ್ನುವುದು ಬಹುದೊಡ್ಡ ಪ್ರಶ್ನೆ ; ನೀರಿನಲ್ಲಿ ಮುಖವು ಅಸ್ಪಷ್ಟವಾಗಿ ಕಾಣುತ್ತದೆ. ಸೆರೆಯಲ್ಲಿ ಹೃದಯವು ಎದ್ದು ಕಾಣುತ್ತದೆ ; ಸೆರೆ ಕುಡಿದಾಗ ಒಂದು ತಪ್ಪಿಲ್ಲದೆ ಇದನ್ನು ಉಚ್ಚರಿಸಿದರೆ ಅವನು ಸೆರೆಕುಡಿದರೂ ತಪ್ಪಲ್ಲ - ''ಹಿರೇ ಕುರುಬ ಕರಿಯನ ಮೂರು ಕರೇ ಕುರಿಮರಿಗಳು ಹಿರೇಕೆರೆಯ ಏರಿಯ ಮೇಲೆ ಏರುತ್ತವೆ'', ಅಥವಾ ಹತ್ತು ಬಾರಿ ''ಎಡರಂ ತೊಡರಂ ಎಡತೊಡರೆಡರದೆ ತೊಡರಿಂ'' ಅನ್ನಬೇಕು. ಎಷ್ಟು ಕುಡಿದರೂ ನನಗೇನೂ ಆಗುವುದಿಲ್ಲ ಎನ್ನುವವರು ಅನೇಕರಿದ್ದಾರೆ - ಎಷ್ಟೂ ಕುಡಿಯದಿದ್ದರೂ ನನಗೇನೂ ಆಗುವುದಿಲ್ಲ ಎನ್ನುವವರು ?, ವಿದ್ಯೆ ಇಲ್ಲದಿದ್ದರೆ ಬುದ್ಧಿ ಹಾಳಾಗುತ್ತದೆ. ಅನ್ನವಿಲ್ಲದಿದ್ದರೆ ದೇಹವು ಹಾಳಾಗುತ್ತದೆ - ಸೆರೆ ಇದ್ದರೆ ಇವೆರಡೂ ಜೋಕಾಗುತ್ತವೆ ? ಅದ್ಗಣೆಯ ಮೇಲಿಟ್ಟಾಗ ಕಬ್ಬಿಣದ ಗುಣವು ತಿಳಿದೀತು - ಸೆರೆ ಕುಡಿದಾಗ ಮನುಷ್ಯನ ಮನಸ್ಸು ತಿಳಿದೀತು ; ಯುವಕನಿಗೆ ಸೆರೆ ಕುಡಿಸಿದರೆ ಉರಿಗೆ ಉರಿ ಹಚ್ಚಿದಂತೆಯೇ.

**ಸೇಡು** ಸೇಡು ತೀರಿಸಿಕೊಳ್ಳಲು ಟನ್ನುಗಟ್ಟಲೆ ಧೈರ್ಯವು ಬೇಕು - ಕ್ಷಮಿಸಲು ಅರ್ಧ ತೊಲೆಯಷ್ಟು ವಿವೇಕವೇ ಸಾಕು.

**ಸೇವಕ** ತಾನೇ ಸಂಬಳ ಕೊಟ್ಟು ಇಟ್ಟುಕೊಂಡ ಸ್ವಂತ ಶತ್ರು.

**ಸೇವೆ** ಈಶ ಸೇವೆಗಿಂತಲೂ ದೇಶಸೇವೆ ಸುಲಭ - ಈಶಸೇವೆ ಮಾಡಲು ಸುಡುಗಾಡಿಗೆ ಹೋಗಬೇಕು, ದೇಶಸೇವೆ ಮಾಡಲು ಅಸೆಂಬ್ಲಿಗೆ ಹೋದರೆ ಸಾಕೇ ಸಾಕು.

**ಸೊಕ್ಕು** ಚರ್ಮವು ಸುಕ್ಕು ಬೀಳುವ ಒಳಗಾಗಿ ದೇಹದ ಸೊಕ್ಕು ಮುರಿದರೆ ಅವನೇ ಸಾಧು.

**ಸೋಮಾರಿ** ಸೋಮವಾರವೂ ರಜೆ ಕೇಳುವವನು ; ತಂದೆ ತಾಯಿಗಳು ಸೋಮಾರಿಗಳಾದರೆ, ಮಕ್ಕಳ ಹಲ್ಲು ನಾಲಗೆಗಳು ಮಾತ್ರವೇ ಚೆನ್ನಾಗಿ ಕೆಲಸ ಮಾಡುತ್ತವೆ; ಒಬ್ಬನೇ ಇದ್ದಾಗ ಸೋಮಾರಿಯಾಗಿರಬೇಡ - ಸೋಮಾರಿಯಾಗಿದ್ದಾಗ ಒಬ್ಬನೇ ಇರಬೇಡ - ಸೋಮಾರಿಯ ಸಲುವಾಗಿ ಎರಡೆರಡು ಬಾರಿ ಬೆಳಗಾಗಲು ಸಾಧ್ಯವೇ ? ಸೋಮ + ಅರಿ = ಸೋಮಪಾನದ ಶತ್ರು.

**ಸೋಮಾರಿತನ** ಎಲ್ಲ ಪಾಪಗಳಿಗೂ ಉಗಮಸ್ಥಾನ. ಅತಿಥಿಯಾಗಿ ಬರುತ್ತದೆ - ಅರಸನಾಗಿ ಆಳುತ್ತದೆ; ಸೋಮಾರಿ ತನದಿಂದ ಸುಖವು ದೊರೆಯಬೇಕಾದರೆ ಕೈಯ್ಯಲ್ಲಿ ಹೇರಳವಾಗಿ ಕೆಲಸವಿರಬೇಕು ; ಸೋಮಾರಿತನದಿಂದ ಬೇರಾವ ಚಿಕ್ಕಪುಟ್ಟ ಕೆಡಕೂ ಆಗದಿದ್ದರೆ, ಒಂದು ದೊಡ್ಡ ಕೆಡುಕಂತೂ ಕಾದೇ ಇರುತ್ತದೆ. ಅದೇ ಸೋಮಾರಿತನ ! ಸೋಮಾರಿತನವನ್ನು ಗೆದ್ದವನು ದೇವನನ್ನು ಗೆದ್ದ ಎಂದರೆ, ನಾನು ನಂಬುತ್ತೇನೆ ; ಸೋಮಾರಿತನವು ಕುಂಟುತ್ತ ಸಾಗುತ್ತದೆ - ಬಡತನವು ಭರ್ರೆಂದು ಬಂದು ಬಿಡುತ್ತದೆ.

**ಸಂಕಷ್ಟ** ಸಿಟ್ಟಿನಿಂದ ಬುದ್ಧಿ ಹೇಳುವ ಸಹೃದಯದ ಅತ್ತೆ ; ಇದಿರಿಸಲು ನಾವು ಸಿದ್ಧರಾದಾಗ ಒದಗಿದರೆ ಅದು ಸಂಕಷ್ಟವೇ ಅಲ್ಲ.

**ಸಂಗೀತ** ಸಂಗೀತಕ್ಕೆ ಬರೀ ಪಶುಗಳೇ ಏಕೆ ? ಅನೇಕ ಗಂಡಂದಿರೂ ತಲೆದೂಗುತ್ತಾರೆ. ಸಂಗೀತ ಬಲ್ಲವಳಿಗೆ ಗಂಡನು ದೊರೆಯುವುದು ಕಷ್ಟವಲ್ಲ - ದೂರಾಗುವುದೂ ಕಷ್ಟವಲ್ಲ - ದೂರಾದರೂ ಕಷ್ಟವಿಲ್ಲ.

**ಸಂಗೀತಗಾರ** ತಾನು ಹಾಡುತ್ತಿರುವ ಹಾಡಿನ ಅರ್ಥವನ್ನೇ ಅರಿಯದ ಮಹಾರಸಿಕ; ಹೊಟ್ಟೆಯ ಪಾಡಿಗಾಗಿ ತೊಡೆ ಬಡಿದುಕೊಳ್ಳುವವ ; ಪೋಲಿಯುವವನ ಬಲಕ್ಕೆ, ಅಳುವವನ ಎಡಕ್ಕೆ, ಹಾಡುವವನ ಮುಂದೆ ಎಂದೂ ಕೂಡಬೇಡ ; ಇವನ ಕಂಠವು ಸುಖವನ್ನು ಕೊಡುತ್ತದೆ - ಕೂಡಲೆ ಅವನ ಮುಖವು ಅದನ್ನು ಕಸಿದುಕೊಳ್ಳುತ್ತದೆ.

**ಸಂಗೀತಗಾರಳು** ಇವಳ ಕಂಠ ಮಾಧುರ್ಯಕ್ಕೆ ಹಾವು ತಲೆದೂಗುತ್ತದೆ. ಹೆಚ್ಚು ವಿಷಕ್ಕೆ ಕೊಂಚ ವಿಷವು ತಲೆದೂಗಲೇಬೇಕು.

**ಸಂಘ** ಸಂಘವು ಮುಂದಾದಂತೆಲ್ಲ ಅದರ ಕೆಲಸವು ಹಿಂದಾಗುತ್ತದೆ.

**ಸಂಝಾಯಿಷಿ** ಇಡೀ ಜಗತ್ತಿನಲ್ಲಿ ಎರಡೇ ಬಗೆಯ ಜನರಿದ್ದಾರೆ- ಚೆನ್ನಾಗಿ ಕೆಲಸವನ್ನು ಮಾಡುವವರು ಮತ್ತು ಚೆನ್ನಾಗಿ ಸಂಝಾಯಿಷಿ ಕೊಡುವವರು.

**ಸಂತಾನ ನಿರೋಧ** ಸಂತಾನವಿಲ್ಲದವರಿಗೇ ಸಾಧ್ಯ ; ನಿಷ್ಕರ್ಮ ಕಾಮ.

**ಸಂತೆ** ಹೆಂಡತಿ ಮತ್ತು ಹಣ್ಣುಮಾರುವವಳು ಸೇರಿದರೆ ಮನೆಯಲ್ಲಿಯೇ ಸಂತೆಯಾಗುತ್ತದೆ.

**ಸಂತೋಷ** ಬಾಳು ಎಂಬ ನಾಣ್ಯಕ್ಕೆ ಎರಡು ಮುಖಗಳು. ಹೆಚ್ಚು

ದುಃಖ ಮತ್ತು ದುಃಖ - ಈ ಎರಡನೆಯದನ್ನೆ ಅರಿತವರು ಸಂತೋಷವೆಂದು ತಿಳಿಯುತ್ತಾರೆ.

**ಸಂಪತ್ತು** ಸಂಪು ಹೂಡಿದರೆ ದೊರೆಯುವ ತುತ್ತು ; ತಿಂಮನ ಸಂಪತ್ತೆಲ್ಲವೂ ಅವನ ತೊಪ್ಪಿಗೆಯ ಅಡಿಯಲ್ಲಿ - ಉಳಿದೆಲ್ಲ ಸಂಪತ್ತು ಅವನ ಕಾಲಡಿಯಲ್ಲಿಯೇ.

**ಸಂಪನ್ನ** ಅನ್ನಕ್ಕಾಗಿ ಸಂಪು ಹೂಡುವವನೇ ಸಂಪನ್ನ ; ದೇವನು ಸಂಪನ್ನನಾದರೆ ಪೂಜೆಯನ್ನು ಕಾಣದೆ ಸಾಯುತ್ತಾನೆ. ಸಂಪನ್ನನಂತೆ ಕಾಣುವ ಕಲೆಯನ್ನು ಕಲಿತವನೊಬ್ಬನೇ ಸಂಪನ್ನ - ಉಳಿದೆಲ್ಲ ಸಂಪನ್ನರಾರೂ ಸಂಪನ್ನರಲ್ಲ.

**ಸಂಪಾದಕ** ಸಂಪಾದನೆಗೆ ಧಕ್ಕೆ ತಂದುಕೊಳ್ಳುವವನೇ ಸಂಪಾದಕ ; ಏಜೆಂಟನ ಕೃಪೆಯಿಂದ ಬಾಳುವ ಅಥವಾ ಬೀಳುವ ವಿದ್ಯಾವಂತ ಬಕರಾ ; ಸಂಪಾದಕನು ಅರಸನಾದರೆ ಅವನದೆಲ್ಲವೂ ಕಾಗದದ ಸೈನ್ಯವೇ ; ತಾನು ಸತ್ತ ಸುದ್ದಿಯನ್ನು ತನ್ನ ಸ್ವಂತ ಪತ್ರಿಕೆಯಲ್ಲಿಯೇ ಓದಿ ಸಾಯಬೇಕೆಂಬ ಹಂಬಲವುಳ್ಳವನು ; ಸ್ವಂತ ಶಂಖ ಉಳ್ಳ ಸಂಪಾದಕನೇ ಧನ್ಯ !

**ಸಂಭಾಷಣೆ** ಭಾಷಣದಲ್ಲಿ ಸಭಿಕರೂ ಮಾತನಾಡಿದರೆ ಸಂಭಾಷಣೆಯಾಗುತ್ತದೆ. ಸಂಭಾಷಣೆಯನ್ನು ಒಬ್ಬರೇ ಆಕ್ರಮಿಸಿಕೊಂಡರೆ ಭಾಷಣವಾಗುತ್ತದೆ.

**ಸಂಸ್ಕೃತಿ** ಮನುಷ್ಯನಲ್ಲಿ ಎಲ್ಲವೂ ಹೋದರೂ ಅವನ ಜೀವದೊಂದಿಗೆ ಇನ್ನೂ ಉಳಿದಿರುವುದೇ ಸಂಸ್ಕೃತಿ.

**ಸಂಸಾರಿ** ಶ್ರೀಮಂತ ಸಂಸಾರಿಯು ಮಾಡಲಂಜುವ ಕೆಡುಕನ್ನು ಬಡಸನ್ಯಾಸಿಯೂ ಮಾಡಬಲ್ಲ.

**ಸಂಹಾರ** ಸಂಪಾದಕನಿಗೆ ಹಾಕುವ ಹಾರ.

**ಸಿಂಹ** ಗೃಹಸಿಂಹ ಎಂದರೆ ಗಂಡ ; ಗ್ರಾಮಸಿಂಹ ಬೊಗಳುತ್ತದೆ, ಗೃಹಸಿಂಹ ಕಚ್ಚಿಸಿಕೊಳ್ಳುತ್ತದೆ.

**ಸಿಂಹಾಸನ** ಒಂದೇ ಕೊಲೆ ಮಾಡಿದವನು ಗಲ್ಲಿಗೇರುತ್ತಾನೆ - ನೂರಾರು ಮಾಡಿದವನು ಸಿಂಹಾಸನವನ್ನೇರುತ್ತಾನೆ.

**ಸುಂಣ** ಗಂಡ ಹೆಚ್ಚು ಜಾಣನಾದರೆ ಹೆಂಡತಿ ಎಲೆಗೆ ಸುಂಣ ಹಚ್ಚುತ್ತಾಳೆ. ಹೆಂಡತಿ ಹೆಚ್ಚು ಜಾಣಳಾದರೆ ಗಂಡನ ನಾಲಗೆಗೇ ಹಚ್ಚುತ್ತಾಳೆ.

**ಸೌಂದರ್ಯ** ಜಾಣಸಿಗೆ ಸುಗುಣವೇ ಸೌಂದರ್ಯ - ಕೋಣಸಿಗೆ ಸೌಂದರ್ಯವೇ ಸುಗುಣ ; ಸೌಂದರ್ಯಕ್ಕಾಗಿ ಹೆಂಣಿಗೆ ಮೆಚ್ಚುವವನಕ್ಕಿಂತಲೂ ಬಾಟ್ಲಿ ಚೆನ್ನಾಗಿದೆಯೆಂದು ವಿಷ ಕುಡಿಯುವವನೇ ಜಾಣ ; ಸ್ತ್ರೀಯಳಿಗೆ ಸೌಂದರ್ಯವೇ ಶಕ್ತಿ, ಹುಸಿನಗುವೇ ವಿದ್ಯೆ ; ಮದುವೆಯಾದ ಕೆಲ ಕ್ಷಣಮಾತ್ರವೇ ಹೆಂಡತಿಯ ಮುಖದಲ್ಲಿದ್ದು, ಆದಾವಾಗಲೋ ಇತರರ ಹೆಂಡಿರ ಮುಖಕ್ಕೆ ಹಾರಿಹೋಗುವ ಮಹಾಭೂತ ; ಸೌಂದರ್ಯವಲ್ಲೇನಿದೆ ಎನ್ನುವವನ ಹೆಂಡತಿಯನ್ನು ನೋಡಬೇಕೆ ? - ದೇವರಾಣೆಯಾಗಿಯೂ ಕುರೂಪಿ ; ಹೆಂಣಿನ ಮುಖದಲ್ಲಿರುವುದಿಲ್ಲ - ನೋಡುವ ಗಂಡಿನ ಕಂಣಿಗೆ ಮಾತ್ರ ಕಾಣುತ್ತದೆ ; ಸೌಂದರ್ಯವು ನಗದು ಹಣವಿದ್ದಂತೆ ; ಸೌಂದರ್ಯದೊಂದಿಗೆ ಹುಟ್ಟಿದವಳಿಗೆ ಅರ್ಧ ಮದುವೆಯಾದಂತೆಯೇ ; ಹೆಂಣು ದಾರಿ ತಪ್ಪಿದರೆ ಅವಳ ಸೌಂದರ್ಯದ ತಪ್ಪು - ಗಂಡು ದಾರಿ ತಪ್ಪಿದರೆ ಅವನ ಧೈರ್ಯದ ತಪ್ಪು ; ಹೆಂಣಿಗೆ ಸೌಂದರ್ಯವಿದ್ದಿದ್ದರೆ ಆಭರಣಗಳನ್ನೇಕೆ ಬೇಡುತ್ತಿತ್ತು - ಹಾಯಾಗಿ ಗಂಡಿನಂತೆಯೇ ಇರಬಹುದಿತ್ತು.



**ಹಕ್ಕು** ನ್ಯಾಯಬದ್ಧವಾದ ಸ್ವಾರ್ಥ

**ಹಗಲು** ಎರಡು ನಿದ್ರೆಗಳ ಮಧ್ಯೆ ಬರುವ ಉದ್ದವಾದ ಇಂಟರ್ವೆಲ್ - ಸೋಮಾರಿ ಶತಕದಿಂದ !

**ಹಡಗು** ಯಾವಾಗಲಾದರೂ ಮುಳುಗಬಹುದಾದ ನೀರಿನ ಮೇಲಿರುವ ಜೇಲು.

**ಹಣ** ಕೊಂಚ ಹಣವಿರುವವನು ಇನ್ನೂ ಕೊಂಚ ಹಣಕ್ಕಾಗಿ ಕೊಂಚವೇ ಆಶೆ ಪಡುತ್ತಾನೆ. ಹೆಚ್ಚು ಹಣವಿರುವವನು ಇನ್ನೂ ಹೆಚ್ಚು ಹಣಕ್ಕಾಗಿ ಹೆಚ್ಚು ಆಶೆಪಡುತ್ತಾನೆ. ದೇವನಿಗೆ ಹಣವೆಂದರೆ ಹೇಸಿಗೆ - ಇಲ್ಲವಾದರೆ ಅಂತಹರಿಗೇಕೆ ಕೊಡುತ್ತಿದ್ದ ? ದೇವನು ಹಣವನ್ನು ಕೆಲವರಿಗೆ ಕೊಟ್ಟು ಮರೆಯುತ್ತಾನೆ - ಹಲವರಿಗೆ ಮರೆತು ಕೊಡುತ್ತಾನೆ; ಹಣವು ಮಾತನಾಡುವಾಗ ಸತ್ಯವು ಸತ್ತವನಂತೆ ಬಿದ್ದಿರುತ್ತದೆ; ನೀನು ಹಣವಂತನಾದರೆ ನಿನ್ನನ್ನು ನೀನು ತಿಳಿಯಲಾರೆ. ದರಿದ್ರನಾದರೆ ಇತರರು ನಿನ್ನನ್ನು ತಿಳಿಯಲಾರರು. ಪಾಪವನ್ನು ಗಳಿಸಲು ಬೇಕಾಗುವಂತೆ ಪುಣ್ಯವನ್ನು ಗಳಿಸಲಿಕ್ಕೂ ಹಣವು ಬೇಕು ; ಹಣವನ್ನು ಕಳೆದುಕೊಂಡ ಹೆಂಣು ಅಳುತ್ತದೆ - ಹೆಂಣನ್ನು ಕಳೆದುಕೊಂಡ ಗಂಡು ನಗುತ್ತದೆ. ಹಣವಿಲ್ಲದುದಕ್ಕಾಗಿ ಅನೇಕ ಬಾರಿ ಮಾನವನ್ನು ಕಳೆದುಕೊಳ್ಳಬೇಕಾಗುತ್ತದೆ. ಹಣವು ಮುಂದೆ

ಹೊರಟರಾಯಿತು. ಹಿಂದೆ ಬರುವವರೆಲ್ಲರಿಗೂ ಅದೇ ದಾರಿ ಬಿಡಿಸುತ್ತದೆ. ಹಣದ ಬೆಲೆ ಅರಿಯದವನಿದ್ದರೆ ಅವನಿಗೆ ಹೇಳು - 'ನಿನ್ನ ಹೆಂಡತಿ ಬೇಡಿದಾಗ ಒಂದೇ ಒಂದು ಬಾರಿ ಇಲ್ಲ ಎನ್ನು' ಎಂದು ; ಕೈಯ್ಯಲ್ಲಿ ಎಷ್ಟೂ ಹಣವಿಲ್ಲದವನು ಸಂತೆಯಲ್ಲಿ ದುಡು ದುಡು ಹೋಗುತ್ತಾನೆ. ಹಣವು ಗೊಬ್ಬರದಂತೆ - ಹರಡಿದಷ್ಟೂ ಅದರ ಉಪಯೋಗವು ಹೆಚ್ಚು. ಪ್ರೀತಿಯು ಏನನ್ನಾದರೂ ಮಾಡಿಸಬಲ್ಲದು, ಹಣವು ಎಲ್ಲವನ್ನೂ ಮಾಡಿಸುತ್ತದೆ. ನಾವಿಬ್ಬರೂ ಅಣ್ಣತಮ್ಮಂದಿರು ನಿಜ - ನಮ್ಮ ಜೇಬುಗಳು ಅಕ್ಕ ತಂಗಿಯರಲ್ಲವಲ್ಲ ? ಹಣವನ್ನು ಕೂಡಿಡುವುದೇ ಹಣದ ಬಹು ದೊಡ್ಡ ದುರುಪಯೋಗ ; ಹಣಕ್ಕೆ ಬೆಲೆ ಹೆಚ್ಚಿದಂತೆಲ್ಲ ಮಾನವನ ಬೆಲೆ ಕಡಿಮೆಯಾಗುತ್ತದೆ ; ಹಣದಿಂದ ತೃಪ್ತಿ ಬರುವುದಿಲ್ಲ - ಅತೃಪ್ತಿ ಹೆಚ್ಚಾಗುತ್ತದೆ ; ಹಣವಿಲ್ಲದವನು ಹೆಣಕ್ಕೆ ಸಮಾನ ಎಂಬುದು ಶುದ್ಧ ಸುಳ್ಳು - ಹೆಣಕ್ಕೆ ಹಣದ ಅವಶ್ಯಕತೆಯೇ ಇಲ್ಲ ; ಕೈಲಿದ್ದ ಹತ್ತನ್ನು ಖರ್ಚು ಮಾಡುವವನು ಒಂಭತ್ತನ್ನು ಖರ್ಚು ಮಾಡಿ ಒಂದನ್ನು ದಾನ ಕೊಡುವವನಿಗಿಂತಲೂ ಹೆಚ್ಚು ಜಾಣರೀತಿಯಲ್ಲಿ ಹಣವನ್ನು ಉಪಯೋಗಿಸುತ್ತಾನೆ; ಹಣದ ಬೆಲೆ ಏನೆಂಬುದನ್ನು ಅರಿಯಬೇಕಾದರೆ ಸ್ನೇಹಿತರನ್ನು ಸಾಲ ಕೇಳು.

**ಹಣೆಯಬರಹ** ಹೇಡಿಗಳ ಶಬ್ದಕೋಶದಲ್ಲಿ ಮಾತ್ರವೇ ಇರುವ ಶಬ್ದ - ಶಿಂಮು ರಸಾಯನದಲ್ಲಿ ತಪ್ಪಿ ಬಂದಿದೆ ?

**ಹರಕ** ಹರಕ ಬಟ್ಟೆ ಹೇಳುವುದು ತೊಟ್ಟವನ ಬಡತನವನ್ನಲ್ಲ. ಅಗಸನ ಪ್ರಾಮಾಣಿಕತೆಯನ್ನು.

**ಹರಿಜನರು** ದೇವಾಲಯಕ್ಕೆ ದೊರೆತಿರುವ ಕಟ್ಟಕಡೆಯ
ಗಿರಾಕಿಗಳು.

**ಹರಿಶ್ಚಂದ್ರ** ಅರಸನಾಗಿದ್ದ ಕಾರಣ ಸುಳ್ಳನ್ನಾಡದೆ ಸತ್ತ —
ಮಂತ್ರಿಯಾಗಿದ್ದಿದ್ದರೆ ?

**ಹರಿಹರರು** ಮೂರ್ಖಭಕ್ತರ ಪಾರ್ಟಿಯ (ಮಿಸ್) ಲೀಡರ್ ಗಳು.

**ಹಲ್ಲು** ಹಲ್ಲಿಲ್ಲದೆ ಕಡಲೆ ಇರುವವನಕ್ಕಿಂತಲೂ ಹಲ್ಲು ಕಡಲೆ
ಎರಡೂ ಇಲ್ಲದವನೇ ಮೇಲು ; ಹಲ್ಲು ಇದ್ದಿದ್ದರೆ
ಕಷ್ಟ ಕೂಡ ಕಚ್ಚುತ್ತಿತ್ತು. ಲಕ್ಷ ಸುಳ್ಳುಗಳಿಗೆ ಒಂದು
ಹಲ್ಲು ಬೀಳುವಂತಿದ್ದರೆ ಎಲ್ಲ ರಾಜಕಾರಣಿಗಳಿಗೆ
ಬರೀ ಬೋಳು ಬೊಚ್ಚು ಬಾಯಿಗಳೇ ಇರುತ್ತಿದ್ದವು.

**ಹಲ್ಲುಕಡ್ಡಿ** ಬರಗಾಲದಲ್ಲಿ ಮುದುಕ ಮಾವನಿಗೆ
ಹಲ್ಲುಕಡ್ಡಿಯನ್ನು ಕೊಡುವವನೇ ಯೋಗ್ಯನಾದ
ಅಳಿಯ.

**ಹಾದರ** ಅಗ್ನಿಸಾಕ್ಷಿಯಾಗಿ ಲಗ್ನವಾದ ಗಂಡಹೆಂಡಿರು ಕೇವಲ
ಅಭ್ಯಾಸ ಬಲದಿಂದ ನಡೆಯಿಸುವ ಪ್ರೇಮರಹಿತವಾದ
ಸರ್ಕಸ್ಸು. ಹಣಸಹಿತವಾದ ಕಾಮಕ್ರೀಡೆ. ಹಾಗೆ
ಇಲ್ಲವೆಂದು ಹಾದರ ಬಿಡಲು ಬಂದೀತೆ ?

**ಹಾದರಗಿತ್ತಿ** ಹಾಡುವವನಿಗೊಂದು ಶ್ರುತಿ, ಹಾದರಗಿತ್ತಿಗೊಬ್ಬ ಪತಿ
ಇರಲೇಬೇಕು.

**ಹಾಲು** ದ್ರವರೂಪದಲ್ಲಿರುವ ಗೋಮಾಂಸ : ಹೆಚ್ಚಾಗಿ
ಖರ್ಚಾಗುವುದು ನಾಯಿ ಮತ್ತು ಕಾಫಿ ಕುಡಿಯುವ
ಅತಿಥಿಗಳಿಗೆ ಮಾತ್ರ.

**ಹಾವು** ಹಾವಿಗೆ ವಿಷದ ಕೊರತೆಯಾದಾಗಲೆಲ್ಲಾ ಮನುಷ್ಯನನ್ನು ಕಚ್ಚಿ ಗಳಿಸಿಕೊಳ್ಳುತ್ತದಂತೆ.

**ಹಾಸ್ಯಗಾರ** ಸಾಹಿತಿಯ ವೇಷದಲ್ಲಿರುವ ಧರ್ಮೋಪದೇಶಕ. ಸದಾ ನಗುತ್ತಿರುವವರನ್ನು ಯಾವಾಗಲೋ ಒಮ್ಮೆ ನಗಿಸಲು ಪ್ರಯತ್ನ ಮಾಡುವವನು; ಹಳೆ ನಗೆ ಚುಟುಕಗಳನ್ನು ಹೊಸದಾಗಿ ಸೃಷ್ಟಿಸುವವನು ; ಹಾಸ್ಯಗಾರನಿಗೆ ನಗುವ ಹಕ್ಕಿಲ್ಲ. ನಕ್ಕರೆ ಚಪ್ಪಾಳೆ ತಟ್ಟಬೇಕು ಅಷ್ಟೇ. ನಸ್ಯದ ಡಬ್ಬಿಗೆ ಸೀನುವ ಅಧಿಕಾರವಿಲ್ಲ.

**ಹಾಸಿಗೆ** ಹಾಸಿಗೆ ಇದ್ದಷ್ಟೆ ಹೊರಳಾಡು - ನೆಲಕ್ಕುರುಳಿದರೆ ಹಾಸಿಗೆ ಕಳವಾದೀತು ; ಹಾಸಿಗೆಯೇ ಸೋಮಾರಿಯ ಜೇಲು.

**ಹಾಳು** ಹುಂಜವು ಮೂಕನಂತಿದ್ದು, ಹೇಂಟೆಯು ಕೂಗುವ ಮನೆಯು ಹಾಳಾಗಲು ಬಹುದಿನಗಳು ಬೇಕಿಲ್ಲ.

**ಹಿಡಿಕೆ** ಪಾಪಕ್ಕೆ ಆಯುಧಗಳು ಅನೇಕ - ಅವೆಲ್ಲಕ್ಕೂ ಭದ್ರವಾದ ಹಿಡಿಕೆ ಒಂದೇ, ಅದು ಸುಳ್ಳು.

**ಹಿತ** ಗಂಡಿನ ಆಯುಧಗಳು ಅನೇಕ - ಅವೆಲ್ಲಕ್ಕೂ ಭದ್ರವಾದ ಹಿಡಿಕೆ ಒಂದೇ, ಸುಳ್ಳು.

**ಹಿತ** ಗಂಡಿನ ಕೈಯಿಂದಾದರೆ ಹತ - ಹೆಣ್ಣಿನ ಕೈಯಿಂದಾದರೆ ಅದೇ ಹಿತ.

**ಹಿರಿಮಗ** ಹಿರಿಯುವ ಮಗ - ತಂದೆಯ ರೂಪಾಯಿ ನೋಟುಗಳನ್ನು ; ಕಿರಿಮಗ ನೋಡಿರಿ.

**ಹಿರಿಸಾಹಿತಿ** ಕಿರಿಸಾಹಿತಿಗಳು ಮೇಲೆ ಬಂದರೇನು ಗತಿ ಎಂದು ಅಸೂಯೆ ಪಡುವವನೇ ಹಿರಿಸಾಹಿತಿ.

**ಹುಚ್ಚ** ಜಗತ್ತಿನ ತುಂಬ ಬರೀ ಹುಚ್ಚರೇ ಇದ್ದಾರೆ. ನನ್ನ ನಿನ್ನ ಹೊರತು. ಆದರೂ ನಾನು ನಿನ್ನಷ್ಟು ಹುಚ್ಚನಲ್ಲ ಎನ್ನುತ್ತಾನೆ ಒಬ್ಬ ಹುಚ್ಚ.

**ಹುಚ್ಚಾಸ್ಪತ್ರೆ** ಹಿಡಿಯದ ಹುಚ್ಚನ್ನು ಹೆಚ್ಚು ಗುಣಮಾಡಿ ಹಿಡಿದ ಹುಚ್ಚನ್ನು ಕೊಂಚವೇ ಹೆಚ್ಚು ಮಾಡುತ್ತದೆ. ಗುಣವಾಗಬಹುದಾದ ಹುಚ್ಚರನ್ನು ಮಾತ್ರವೇ ಹುಚ್ಚಾಸ್ಪತ್ರೆಯ ಒಳಗಡೆ ಬಿಟ್ಟುಕೊಳ್ಳುತ್ತಾರೆ. ಉಳಿದವರೆಲ್ಲರೂ ಹೊರಗೇ !

**ಹುಚ್ಚು** ಹೆಚ್ಚಾಗಿ ವ್ಯಕ್ತಿಗಳಿಗೆ ಹಿಡಿಯುವುದಿಲ್ಲ - ಜಾತಿ, ಗುಂಪು, ಪ್ರಾಂತ, ದೇಶಗಳಿಗೆ ಹಿಡಿಯುತ್ತದೆ.

**ಹುಟ್ಟು** ಸಾವಿಗೆ ಮೊದಲ ಹೆಜ್ಜೆ ಹುಟ್ಟು - ಹುಟ್ಟಿಗೆ ಮೊದಲ ಹೆಜ್ಜೆ ಸಾವು.

**ಹುಡುಗಿ** ಹುಡುಗನಿಂದ ಉಪಕಾರವನ್ನು ಪಡೆಯುವಾಗಲೂ ಉಪಕಾರ ಮಾಡುವವಳಂತೆ ವರ್ತಿಸುವವಳು.

**ಹುಡುಕು** ಕಳೆದುಕೊಂಡಲ್ಲೇ ಹುಡುಕಬೇಡ - ಒಂದು ದೊರೆತಲ್ಲಿಯೇ ಇನ್ನೊಂದಕ್ಕಾಗಿ ಹುಡುಕು.

**ಹುರಳಿ** ಹೆಣ್ಣಿನಲ್ಲಿರುವ ಹುರುಳು ; ಹಳ್ಳಿಗಳಲ್ಲಿಯೂ ಹುರುಳಿಯನ್ನು ಜನರು ತಿನ್ನುತ್ತಾರೆ - ಪಟ್ಟಣಗಳಲ್ಲಿ ಪಶುಗಳು ಉಪವಾಸ ಬೀಳುತ್ತವೆ.

**ಹುಲಿ** ಹುಲಿಯು ಮನುಷ್ಯನನ್ನು ಊಟಕ್ಕಾಗಿ ಕೊಲ್ಲುತ್ತದೆ - ಮನುಷ್ಯನು ಹುಲಿಯನ್ನು ಆಟಕ್ಕಾಗಿ ಕೊಲ್ಲುತ್ತಾನೆ.

**ಹುಳು** ಹುಳು ಹಿಡಿದ ಕಟ್ಟಿಗೆಯಿಂದ ವಿಗ್ರಹವನ್ನು ಕೆತ್ತುವುದಾದರೆ, ಸೋಮಾರಿಯ ಕೈಯಿಂದ ಕೆಲಸವನ್ನು ಮಾಡಿಸಬಹುದು.

**ಹೂ** ಪ್ರಕೃತಿ ಮಾತೆಯ ಸ್ವಂತ ಒಡವೆ. ದೇವನು ನಕ್ಕಾಗ ಕಾಣುವ ಹಲ್ಲುಗಳು ; ನೆಲದ ಮೇಲಿನ ನಕ್ಷತ್ರ.

**ಹೃದಯ** ಎರಡು ಹೃದಯಗಳು ಒಂದಾಗುವುದು ಬಹು ಸುಲಭ. ಒಂದು ಸತ್ತರೆ ಸಾಕು ; ಹೃದಯದ ಕದಕ್ಕೆ ಒಳಚಿಲಕವಿದೆ. ಹೊರಗಿನಿಂದ ಹಾಕಲೂ ಬಾರದು, ತೆರೆಯಲೂ ಬಾರದು ; ಹೆಣ್ಣಿನ ಹೃದಯವನ್ನು ಹಣ್ಣು ಮಾಡಬೇಕಾದರೆ ಗಂಡು ಅವಳನ್ನು ಬೈಯ್ಯಬೇಕು - ಗಂಡಿನ ಹೃದಯವನ್ನು ಹಣ್ಣು ಮಾಡಬೇಕಾದರೆ ಹೆಣ್ಣು ತನ್ನನ್ನು ತಾನೇ ಬೈದುಕೊಳ್ಳಬೇಕು; ತಲೆ ಉಳ್ಳವನು ಎಲ್ಲವನ್ನೂ ತಿಳಿಯುತ್ತಾನೆ- ಹೃದಯ ಉಳ್ಳವನು ಎಲ್ಲರನ್ನೂ ಅರಿಯುತ್ತಾನೆ. ಬಾಳಿನ ಅನುಭವದಿಂದ ಕೆಲವರ ಹೃದಯವು ಒಡೆ ಯುತ್ತದೆ. ಕೆಲವರ ಹೃದಯವು ಕಲ್ಲಾಗುತ್ತದೆ. ಇನ್ನೂ ಕೆಲವರಿಗೆ ಏನೂ ಆಗುವುದಿಲ್ಲ. ಹೃದಯವಿದ್ದರೆ ತಾನೇ ?

**ಹೆಚ್ಚು ಪತಿವ್ರತೆ** ಹೆಚ್ಚು - ಪತಿ ವ್ರತೆ.

**ಹೆತ್ತವರು** ರಾತ್ರಿ ಸಮಯದಲ್ಲಿ ಮಕ್ಕಳನ್ನು ಹೊರಕಳಿಸಬೇಡಿ ಎಂದು ಹೇಳಲು ಮನೆ ಮನೆಗೆ ಹೋದರೆ ಮನೆಗಳಲ್ಲಿ ಹೆತ್ತವರೇ ಇರಲಿಲ್ಲವಂತೆ.

**ಹೆಸರು** ಹೆಸರು ಬೇಕಾದವನು ಸಂತೆಗೆ ಹೋಗಬೇಕು. ಅಲ್ಲಿ ಮಾರುತ್ತಾರೆ -ಹೆಸರು ಬೇಡಾದವನು ಪೋಲೀಸನಾಗಬೇಕು, ನಂಬರು ಬರುತ್ತದೆ. ಕಲ್ಲಿನ ಮೇಲೆ ಹೆಸರು ಕೆತ್ತಿಸಿಕೊಂಡವನೂ ಸಾಯುತ್ತಾನೆ - ಅಯ್ಯೋ ! ಕಲ್ಲೇ ! ಒಳ್ಳೆಯ ಹೆಸರು ಒಂದು ಆಭರಣವಿದ್ದಂತೆ - ಅದನ್ನು ಧರಿಸುವುದು ದೇಹವಲ್ಲ, ಆತ್ಮ.

**ಹೆಸರುವಾಸಿ** ಕೆಲವು ಜನರಿಗಿಂತಲೂ ಅವರ ಹೆಸರೇ ವಾಸಿ - ಅವರಿಂದಾಗದ ಕೆಲಸವು ಅವರ ಹೆಸರಿನಿಂದ ಆಗುತ್ತದೆ.

**ಹೇಡಿ** ದೂಡುವ ಮುನ್ನವೇ ಧುಪ್ಪೆಂದು ಬೀಳುವವನು. ಇಡೀ ಮಾನವ ಜನಾಂಗವನ್ನು ಎರಡು ಬಗೆಯ ಹೇಡಿಗಳಾಗಿ ವಿಂಗಡಿಸಬಹುದು - ಬದುಕಿರುವಾಗ ಸಾಯಬೇಕೆನ್ನುವವರು ಮತ್ತು ಸಾವು ಬಂದಾಗ ಬದುಕಿರಬೇಕೆನ್ನುವವರು.

**ಹೊಗಳು** ಹೊಗಳಿಕೆ ಬೇಕಾದವನು ಸತ್ತು ನೋಡಬೇಕು - ತೆಗಳಿಕೆ ಬೇಕಾದವನು ಸುಮ್ಮನಿದ್ದು ನೋಡಬೇಕು ; ಎಂಮೆಲೆ ಯಾಗುವವರೆಗೂ ಗೆಳೆಯನನ್ನು, ಮದುವೆಯಾಗುವವರೆಗೂ ಮಗನನ್ನು, ಸಾಯುವವರೆಗೂ ಹೆಂಡತಿಯನ್ನು ಹೊಗಳಬೇಡ ; ಒಂದೊಂದು ಗಂಡು ಒಂದೊಂದು ಬಗೆಯ ಹೊಗಳಿಕೆಗೆ ಮಾತ್ರ ಬಲಿ ಬೀಳುತ್ತದೆ - ಹೆಣ್ಣು ಹಾಗಲ್ಲ, ಹೊಗಳಿಕೆಯಾದರಾಯಿತು ; ಯಾವನೂ ಹೊಗಳಿಕೆಯನ್ನು ದಾನವಾಗಿ ಕೊಡುವುದಿಲ್ಲ - ಅದನ್ನು ಬೇಗ ಮರಳಿಕೊಡು ಎಂದು ಹೇಳಿ ಕಡವಾಗಿ ಕೊಡುತ್ತಾನೆ ; ಅವಿವೇಕಿಯ ಕಿವಿಗೆ ಹೊಗಳಿಕೆಯೇ ಅನ್ನ ; ಹೊಗಳುವವನ ಬಾಯಲ್ಲಿ ಹಾವನ್ನೂ ಕೊಲ್ಲುವಂತಹ ವಿಷವಿದೆ. ಮುಂದು ಹೊಗಳುವವನು ಹಿಂದೆ ತೆಗಳದಿದ್ದರೇ ಆಶ್ಚರ್ಯ; ಹೊಗಳುವವನನ್ನು ಮೊದಲು ಹೊರಗೆ ಹಾಕು, ಆಮೇಲೆ ಮುಂದಿನ ಕೆಲಸ ; ಎಲ್ಲ ರಾಜ್ಯಗಳಲ್ಲಿಯೂ, ಎಲ್ಲ ಕಾಲದಲ್ಲಿಯೂ ಚಲಾವಣೆಯಲ್ಲಿರುವ ಏಕಮಾತ್ರ ನಾಣ್ಯವೆಂದರೆ ಹೊಗಳಿಕೆಯೇ ; ಮೂರ್ಖರಿಗೆ ಹೊಗಳಿಕೆ ಆಗಾಗ್ಗೆ ಒಳ್ಳೆಯ ಆಹಾರ ಎಂಬುದೊಂದು ಗಾದೆ ಮಾತು - ಜಾಣರಿಗೆ ಇದು ಅನುಗಾಲವೂ ಆಹಾರ ! ನನಗೆ ಹೊಗಳಿಕೆ ಎಷ್ಟೂ ರುಚಿಸದು ಎಂದು ಹೊಗಳಿಸಿಕೊಳ್ಳುವವರೂ ಇದ್ದಾರೆ ; ಹಾಳು

ಬಾವಿಯಲ್ಲಿ ಬಿದ್ದವನು ಎದ್ದು ಬಂದಾನು - ಹೊಗಳಿಕೆಗೆ ಬಿದ್ದವನು ?

**ಹೊಟ್ಟೆ** ಉದ್ದರಿ ಕೇಳದ ಸಾಹುಕಾರ ; ದೇವನು ಕೊಟ್ಟಿರುವ ಅಲಾರಾಂ ಗಡಿಯಾರ ; ಹೊಟ್ಟೆ ಬರಿದಾದಾಗ ಕೆಲಸ ಮಾಡಲು ಸಾಧ್ಯವಿಲ್ಲ-ತುಂಬಿದಾಗ ನಿದ್ರೆ ! ಹೊಟ್ಟೆಗಿಂತಲೂ ಸಮೀಪದ ಬಂಧು ಇನ್ನಾವನು ? ಹೊಟ್ಟೆ ಹೋಗು ಎಂದಲ್ಲಿಗೆ ಕಾಲು ದುಡುದುಡು ಹೋಗುತ್ತದೆ.

**ಹೊಡೆದಾಡು** ಚಿಕ್ಕವನೊಡನೆ ಹೊಡೆದಾಡುವುದು ಹೇಡಿತನ - ದೊಡ್ಡವನೊಡನೆ ಹೊಡೆದಾಡುವುದು ದಡ್ಡತನ - ಸರಿಸಮಾನನೊಡನೆ ಹೊಡೆದಾಡುವುದು ಅಪಾಯಕರ.

**ಹೊದಿಕೆ** ಕೆಲವು ಪುಸ್ತಕಗಳಿಗೆ ಒಳ್ಳೆಯ ಹೊದಿಕೆ ಇರುತ್ತದೆ. ಅದೇ ಅದರ ಉತ್ತಮ ಭಾಗ ?

**ಹೊನ್ನು** ಹೊನ್ನು ಉಳ್ಳವನ ತೊನ್ನೂ ಚೆಂದ.

**ಹೊಸತು** ಮರೆತು ಹೋದ ಹಳೆಯದೇ ಹೊಸತು. ಅದು ಮತ್ತೆ ಹಳೆಯದಾಗುವವರೆಗೂ.

**ಹೊಸ್ತಿಲು** ಮಹಾ ಪರ್ವತಗಳನ್ನು ದಾಟುವಷ್ಟು ಸುಲಭವಲ್ಲ, ಹೊಸ್ತಿಲನ್ನು ದಾಟುವುದು.

**ಹೋಗು** ಬರುತ್ತಿರುವಾಗ ಹೋಗುವಂತೆ ಕಾಣುವ ಪ್ರಾಣಿಗಳು ಎರಡೇ ಜಗತ್ತಿನಲ್ಲಿ - ತಲೆ ಇಲ್ಲದ ಪಡಿ ಮತ್ತು ತಲೆಉಳ್ಳ ಹೆಂಣು.

**ಹೋತು** ಹೋತನ್ನು ಅರ್ಪಿಸಿ ಹೋಮ ಮಾಡುವವನು ಹೋಮವನ್ನು ಪ್ರೀತಿಸುತ್ತಾನೆ. ಹೋತ ಸತ್ತಿತೆಂದು ಅಳುವವನು ಹೋತನ್ನು ಪ್ರೇಮಿಸುತ್ತಾನೆ.

**ಹಿಂಸೆ** ಹೆಣ್ಣು ಹಂಸ ?

**ಹೂಂ** ಇದೊಂದು ಮಾತು ಇದ್ದಿರದಿದ್ದರೆ ಜಗತ್ತು ಈ ಸ್ಥಿತಿಗೆಲ್ಲಿ ಬರುತ್ತಿತ್ತು ?

**ಹೆಂಡ** ಹೆಂಡತಿ ಹೆಂಡವನ್ನು ಬಿಡು ಎನ್ನುತ್ತಾಳೆ - ಹೆಂಡವು ಎಂದೂ ಹೆಂಡತಿಯನ್ನು ಬಿಡು ಎನ್ನುವುದಿಲ್ಲ, ಬಿಡಿಸಿ ಬಿಡುತ್ತದೆ.

**ಹೆಂಡತಿ** ಗಂಡನ ಪ್ರೈವೇಟ್ ಟೀಚರ್, ಮನೆ ನಿಲ್ಲುವುದು ಹೆಂಡತಿಯ ಮೇಲೆ, ಬೀಳುವುದು ಗಂಡನ ಮೇಲೆ. ಹೆಂಡತಿಯೊಂದು ಹೊದಿಕೆ - ಹೊದ್ದು ಕೊಂಡರೆ ಸೆಕೆ, ಬಿಟ್ಟರೆ ಚಳಿ. ಸತ್ತ ಹೆಂಡತಿ ಉತ್ತಮ ಹೆಂಡತಿ. ಹೆಂಡತಿ ಸತ್ತ ದುಃಖವು ಇನ್ನೊಬ್ಬ ಹೆಂಡತಿ ಬಂದ ಮೇಲೆಯೇ ಹೋಗಬೇಕು. ಹೆಂಡತಿಯನ್ನು ಸದಾ ಸುಖಿಯಾಗಿರಿಸಲು ಯಾರಿಗೂ ಸಾಧ್ಯವಿಲ್ಲ - ಅವಿವಾಹಿತನೊಬ್ಬನ ಹೊರತು. ಸೈನಿಕನ ಹೆಂಡತಿಯು ಇತ್ತ ಮುತ್ತೈದೆಯೂ ಅಲ್ಲ, ಅತ್ತ ವಿಧವೆಯೂ ಅಲ್ಲ. ಹೆಂಡತಿ ಇಲ್ಲದವನಿಗೆ ಸಂಪೂರ್ಣ ಸುಖವಿಲ್ಲ. ಇದ್ದವನಿಗೆ ಅರ್ಧ ಸುಖವಿದೆ. ಹೆಂಡತಿಯನ್ನು ಅನುಗಾಲವೂ ಭುಜದ ಮೇಲೆಯೇ ಹೊತ್ತು ತಿರುಗು. ಒಂದೇ ಬಾರಿ ಇಳಿಸು - ಅಯ್ಯೋ ! ದಣಿವು ಎನ್ನುತ್ತಾಳೆ; ರೈತನು ಎತ್ತನ್ನು ಹೊಡೆದರೆ ಆ ಪೆಟ್ಟು ತನ್ನ ಹೊಟ್ಟೆಗೇ - ಗಂಡನು ಹೆಂಡತಿಯನ್ನು ಹೊಡೆದರೆ ಆ ಪೆಟ್ಟು ತನ್ನ ತಲೆಗೇ ; ಗಂಡನ ಪಾಪವು ಹೊಸ್ತಿಲ ಹೊರಗೇ ನಿಲ್ಲುತ್ತದೆ. ಹೆಂಡತಿಯ ಪಾಪವು ದೇವನ ಜಗುಲಿಯನ್ನು ಏರುತ್ತದೆ. ನಿದ್ರೆ ಬಂದನಂತರ ತಲೆದಿಂಬು, ಮಕ್ಕಳು ಬೆಳೆದ ನಂತರ ಹೆಂಡತಿ ಬೇಕೆ ? ಪ್ರತಿಯೊಬ್ಬನೂ ಒಳ್ಳೆಯವನಾಗಿ ಬಾಳಲಾರ - ಹೆಂಡತಿಯ ಒಪ್ಪಿಗೆ ಬೇಡವೇ ? ವಿಧೇಯಳಾದ

ಹೆಂಡತಿ ಗಂಡನಿಂದ ಕವಾತು ಮಾಡಿಸುತ್ತಾಳೆ.
ಕುರುಡನ ಹೆಂಡತಿಯನ್ನು ಕೂದಲಿಗೇಕೆ ಬಣ್ಣ ?
ಕುದುರೆಯನ್ನು, ಹೆಂಡತಿಯನ್ನು ಆರಿಸುವಾಗ
ಕಣ್ಣು ಮುಚ್ಚಿ ದೇವನ ಮೇಲೆ ಭಾರ ಹಾಕು :
ಒಬ್ಬ ಹೆಂಡತಿಯ ಶಾಪದಿಂದ ಗಂಡನ ಇಡೀ
ಹೃದಯವೇ ಬರಿದಾಗುತ್ತದೆ. ಎಷ್ಟು ಹೆಣ್ಣುಗಳನ್ನು
ತುಂಬಿದರೂ ಇನ್ನೂ ಕೊಂಚ ಸ್ಥಳವೂ ಇರುತ್ತದೆ.
ಹೆಂಡತಿಯು ಗಂಡನಿಗೆ ಬಹು ಚೆಲುವೆಯಾಗಿ
ಕಾಣುವುದು ಎರಡೇ ಬಾರಿ. ಮೊಟ್ಟ ಮೊದಲು
ಮನೆಯಲ್ಲಿ ಕಾಲಿಟ್ಟಾಗ ಮತ್ತು ಕಟ್ಟಕಡೆಗೆ ನಾಲ್ವರು
ಹೊರತಂದಾಗ : ಗೆಳೆಯನ ಹೆಂಡತಿಯನ್ನು
ನೋಡಬೇಡ - ಶತ್ರುವಿನ ಹೆಂಡತಿ ಸಿಗುವುದಿಲ್ಲ;
ಕನ್ಯೆಗಳೆಲ್ಲವೂ ಒಳ್ಳೆಯರೇ - ಕೆಟ್ಟ ಹೆಂಡಂದಿರು
ಎಲ್ಲಿಂದ ಬಂದಿರಬಹುದು ? ಬಡವನಿಗೆ ಶ್ರೀಮಂತ
ಹೆಂಡತಿ ದೊರೆತರೆ ಅವಳು ಮಡದಿಯಾಗುವುದಿಲ್ಲ -
ಮಾಲೀಕಳಾಗುತ್ತಾಳೆ. ಛೇ ! ಹೆಂಡತಿಯನ್ನೇ ಮುಂದೆ
ಎಂದು ಧೈರ್ಯವುದೇ ? ಇಡೀ ಕುಟುಂಬವನ್ನೇ
ಹಾಳು ಮಾಡಬೇಕೆನಿಸಿದಾಗ ದೇವನು ಯಜಮಾನನ
ಹೆಂಡತಿಯೊಬ್ಬಳಿಗೇ ದುರ್ಬುದ್ಧಿಯನ್ನು ಕೊಡು
ತ್ತಾನೆ. ಕಾಯಿಲೆ ಹೆಂಡತಿ ಅಲುಗಾಡುವ ಹಲ್ಲು
ಇದ್ದಂತೆ. ಒಳ್ಳೆಯ ಹೆಂಡತಿ ಮನೆಯ ಮುಂದಿನ
ಮರದಂತೆ - ಕೆಟ್ಟ ಹೆಂಡತಿ ಗೋಡೆಯಮೇಲಿನ
ಗಿಡದಂತೆ; ಒಂದೇ ಒರೆಯಲ್ಲಿ ಎರಡು ಖಡ್ಗಗಳನ್ನಿಡ
ಬಹುದು - ಒಂದೇ ಮನೆಯಲ್ಲಿ ಇಬ್ಬರು ಹೆಂಡಿರನ್ನು
ಇಡಲಾಗದು. ಇಬ್ಬರು ಹೆಂಡಿರು ಇರುವ ಮನೆಗೆ
ಪ್ರತ್ಯೇಕವಾಗಿ ಬೆಂಕಿಯನ್ನು ಹಚ್ಚಬೇಕೆ ? ಇಬ್ಬರು
ಹೆಂಡಂದಿರು ಇರುವವನು ಯಾವುದನ್ನೂ ಒಂದೇ
ತರುವಂತಿಲ್ಲ, ಸೀರೆ, ಸಿಂಗಾರದ ಚೀಲ, ಒಡವೆ

ಎಲ್ಲವೂ ಎರಡೆರಡು-ಅವನಿಗೆ ನ್ಯುಮೋನಿಯಾ ಬಂದರೂ ಡಬ್ಬಲ್ ನ್ಯುಮೋನಿಯಾ ಬರತಕ್ಕದ್ದು! ಹೆಂಡತಿಯಕಿಂತಲೂ ಹೆಂಡತಿಯ ಭಾವಚಿತ್ರವನ್ನು ಕೆಲವರು ಹೆಚ್ಚು ಪ್ರೀತಿಸುತ್ತಾರೆ- ಅದಕ್ಕೆ ನಾಲಗೆ ಇಲ್ಲ? ಪ್ರತಿಯೊಬ್ಬನಿಗೂ ಒಂದು ಹೆಂಡತಿ ಇರಲೇ ಬೇಕು-ಒಂದಕ್ಕೂ ಕಡಿಮೆ ಸಿಕ್ಕುವುದಿಲ್ಲವಲ್ಲ ಈಗ?

**ಹೆಂಣು** ಹೆಂಣು ಇರದಿದ್ದರೆ ಗಂಡು ಇಂದು ಒಂದು ಮೃಗವಾಗಿ ಬಾಳಬೇಕಿತ್ತು-ಅಂತೂ ಮಾನವ ರೂಪದಲ್ಲಿ ಒಂದಾದರೂ ಮೃಗವಿರಲೇ ಬೇಕು: ಗಂಡಿನ ಬೇಸರವನ್ನು ಕಳೆಯಲು ದೇವನು ಹೆಂಣನ್ನು ಸೃಷ್ಟಿಸಿದ-ಬೇಸರ ಕಳೆಯಿತು, ಆದರೆ ಹೆಂಣು ಉಳಿಯಿತು: ಗಂಡಿಗೆ ಗೆಲ್ಲುವ ಆಶೆ-ಹೆಂಣಿಗೆ ಸೋಲಿಸುವ ಆಶೆ: ಹೆಂಣನ್ನು ಹೊಗಳುವವನಿಗೆ ಹೆಂಣು ಹೃದಯದ ಪರಿಚಯವು ಸಾಕಷ್ಟು ಆಗಿಲ್ಲ-ತೆಗಳುವವನಿಗೆ ಎಷ್ಟೂ ಆಗಿಲ್ಲ:ಹೆಂಣು ಪ್ರೀತಿಸುತ್ತದೆ-ಇಲ್ಲವೆ ದ್ವೇಷಿಸುತ್ತದೆ: ಗಂಡು ನ್ಯಾಯವನ್ನು ಹೇಳುತ್ತದೆ-ಹೆಂಣು ನಡೆದೇ ತೋರುತ್ತದೆ: ಉತ್ತಮ ಕಲಾಕೃತಿಯನ್ನು ರಚಿಸಲು ಪುರುಷನಿಗೆ ಸ್ಫೂರ್ತಿಯನ್ನು ಕೊಡುವುದು ಹೆಂಣು-ರಚಿಸಿದಂತೆ ಮಾಡುವುದು ಅದೇ ಹೆಂಣು: ಹೆಂಣನ್ನು ಗೆಲ್ಲುವುದು ಕಷ್ಟವಲ್ಲ-ಏಕೆಂದರೆ ಗೆಲ್ಲುವದೆಂದರೇ ಸೋಲುವುದು: ದೇವನನ್ನು ಬೈದವನಿಗೆ ಒಂದು ದಿನ ನರಕ-ಹೆಂಣನ್ನು ಬೈದವನಿಗೆ ಸದಾ ನರಕ: ತೋಳವನ್ನು ಅರಿಯುವ ಇಚ್ಛೆ ಇದ್ದರೆ ಕುರಿಯಾಗು-ಹೆಂಣನ್ನು ಅರಿಯುವ ಇಚ್ಛೆ ಇದ್ದರೆ ವ್ಯಭಿಚಾರಿಯಾಗು: ಒಳ್ಳೆಯ ಕುದುರೆಯನ್ನು ಬಯಸುವವನಿಗೆ ಕಾಲ್ನಡದೆಯೇ ಗತಿ-ಸುಳ್ಳಾಡದ ಹೆಂಣನ್ನು ಬಯಸುವವನಿಗೆ ಸನ್ಯಾಸವೇ ಗತಿ: ಕೆಡಕು

ಮಾಡಲಾರದ ಹೆಣ್ಣು ಜಗತ್ತಿನಲ್ಲಿ ಎರಡೇ-ಸತ್ತುದು ಒಂದು, ಹಿಗಲಾರದುದು ಇನ್ನೊಂದು : ತಾನು ಬಹು ಜಾಣೆ ಎಂದು ಕೊಂಡಾಗಲೆ ಬಹು ಮೂರ್ಖಳಾಗಿರುತ್ತಾಳೆ: ಪ್ರತಿಹೆಣ್ಣಿಗೂ ಮೂವರು ಗಂಡಂದಿರು ಬೇಕು-ಬೇಡಿದುದನ್ನು ಕೊಡುವ ಶ್ರೀಮಂತ, ಕಣ್ಣ ಪ್ರೀತಿಗೆ ಚೆಲುವ ಇನ್ನೊಬ್ಬ, ಬೇಕಾದಾಗ ಬೆನ್ನುಮೂಳೆ ಮುರಿಯಲು ಮತ್ತೊಬ್ಬ-ಈ ಮೂರೂ ಆಗಬಲ್ಲ ಗಂಡನ್ನು ಕೈಹಿಡಿದ ಹೆಣ್ಣು ಸುಖಿ: ಗಂಡಸಿಲ್ಲದ ಹೆಣ್ಣಿನ ಬಳಿ, ಗೋಡೆ ಇಲ್ಲದ ಬಾವಿಯ ಬಳಿ ಎಂದೂ ಹೋಗಬೇಡ; ಹೆಣ್ಣು ಸತ್ತಾಗಲೆಲ್ಲಾ ನಾರದನು ಅಳುತ್ತಾನಂತೆ-ಒಂದು ಜಗಳ ಕಡಿಮೆಯಾಯಿತೆಂದು: ಗಂಡು ಮಾತ್ರವೇ ತಪ್ಪು ಮಾಡುತ್ತದೆ - ಹೆಣ್ಣು ಮಾಡಿದಾಗ ಅದು ಗಂಡಿನ ತಪ್ಪು ತಿಳುವಳಿಕೆ, ಅಷ್ಟೆ: ಹಡಗವನ್ನೂ ಹೆಣ್ಣನ್ನೂ ಆಗಾಗ್ಗ ರಿಪೇರಿ ಮಾಡುತ್ತಲೇ ಇರಬೇಕು: ಹೆಣ್ಣಿನ ಹಿಂದೆ, ಬಸ್ಸಿನ ಹಿಂದೆ ಓಡಬೇಡ-ಹಿಂದೆ ಇನ್ನೊಂದು ಬಂದೇ ಬರುತ್ತದೆ: ಹೆಣ್ಣು ಇರುವಲ್ಲಿ ಒಂದು ಭೂತವಿದ್ದೇ ಇರುತ್ತದೆ-ಇಲ್ಲದಲ್ಲಿ ಅವೆಷ್ಟೋ: ಗಂಡಿನ ಆತ್ಮವನ್ನು ಸ್ವಚ್ಛವಾಗಿ ತೊಳೆಯುವ ಸೋಪು: ಹೆಣ್ಣನ್ನು ಅರ್ಥಮಾಡಿಕೊಳ್ಳಲು ಈ ಮೂವರಿಗೆ ಮಾತ್ರ ಸಾಧ್ಯವಿಲ್ಲ-ಬಾಲಕನಿಗೆ, ಯುವಕನಿಗೆ ಮತ್ತು ವೃದ್ಧನಿಗೆ ; ಕೆಟ್ಟ ಹೆಣ್ಣನ್ನು ನಂಬಬೇಡ - ಉಳಿದವುಗಳ ಬಗ್ಗೆ ಎಚ್ಚರವಾಗಿರು: ಹೆಣ್ಣು ಗಂಡಿಗೆ ತಾಯಿಯಾಗುತ್ತದೆ, ಇಲ್ಲವೇ ತೋಳವಾಗುತ್ತದೆ: ಹೆಣ್ಣಿನ ನಾಲಗೆಗೆ ಅಂಜದವನು ದೇವನ ಕಾಲಿಗೂ ಬೀಳಬೇಕಿಲ್ಲ: ಹೆಣ್ಣನ್ನು ತರಲು ಬಹುದೂರ ಹೋಗುವವನು ಮೋಸಹೋಗುತ್ತಾನೆ - ಇಲ್ಲವೇ

ಮೋಸಮಾಡುತ್ತಾನೆ: ಹೆಂಣಿನ ಕಂಬನಿಯಲ್ಲಿ ಪಡ್ಡನಿಗೆ ದುಃಖವು ಕಾಣುತ್ತದೆ - ಜಾಣನಿಗೆ ಬರೀ ನೀರು ಮಾತ್ರವೇ ಕಾಣುತ್ತದೆ ; ತನಗೆ ತಿಳಿದುದನ್ನು ಗೆಳತಿಗೆ ಹೇಳುತ್ತದೆ, ತಿಳಿಯದುದನ್ನು ಗಂಡನಿಗೆ ಹೇಳುತ್ತದೆ-ಇನ್ನೂ ಹೇಳುವುದು ಬಹಳ ಇದೆ ಎಂದು ಇಬ್ಬರಿಗೂ ಹೇಳುತ್ತದೆ: ಹೆಂಣು ವಿಚಿತ್ರ ಪ್ರಾಣಿ-ಅದನ್ನು ಹಿಡಿಯಲಿಕ್ಕೆ ಬಲೆ ಬೇಕಿಲ್ಲ-ಅದರಿಂದ ಪಾರಾಗಲಿಕ್ಕೆ ಬೇಕು: ಕೈಗೆ ಸಿಕ್ಕ ಗಂಡನ್ನು ಗಗನಕ್ಕೆ ಹಾರಿಸುತ್ತದೆ-ಇಲ್ಲವೇ ಪಾತಳಕ್ಕೆ ತುಳಿಯುತ್ತದೆ: ಸುಟ್ಟ ಕಟ್ಟಿಗೆಗೆ ಬೇಗ ಬೆಂಕಿ ತಾಗುತ್ತದೆ-ಕೆಟ್ಟ ಹೆಂಣಿಗೆ ಬೇಗ ಗಂಡು ಸಿಗುತ್ತದೆ: ಕೆಟ್ಟ ಹೆಂಣನ್ನು ಕಾಯುವುದು ಅಸಾಧ್ಯ-ಒಳ್ಳೆಯ ಹೆಂಣನ್ನು ಕಾಯುವುದು ಅನವಶ್ಯಕ: ಮನೆಯಲ್ಲಿನ ಹೆಂಣು, ಕಾಲಲ್ಲಿನ ಮುಳ್ಳು ಎರಡೂ ಅಷ್ಟೆ-ಇನ್ನೊಂದು ತಂದು ಇದನ್ನು ಹೊರತೆಗೆಯಬೇಕು: ಹೆಂಣು ಅಳುತ್ತದೆ, ನಾಯಿ ಕುಂಟುತ್ತದೆ-ಎರಡನ್ನೂ ನಂಬಬೇಡ: 'ಏಕೆಂದರೆ' ಎಂದು ಆರಂಭವಾದರೆ ಅದು ಹೆಂಣಿನ ಉತ್ತರವೆಂದೇ ತಿಳಿ: ಹೆಂಣು 'ಹೂಂ' ಎಂಬುದಕ್ಕೂ 'ಊಹೂಂ' ಎಂಬುದಕ್ಕೂ ಎಷ್ಟೂ ಭೇದವಿಲ್ಲ: ಜಾಣ ಹೆಂಣನ್ನು, ಹುಚ್ಚುನಾಯಿಯನ್ನು ಕೆಣಕಬೇಡ: ಹೆಂಣಿನೊಡನೆ ಮಾತನಾಡಿದಷ್ಟೂ ಲಾಭವೇ-ಅಷ್ಟು ಒಳ್ಳೆಯ ಸ್ಕೂಲು ಇನ್ನೊಂದಾವುದು ? ಕೆಟ್ಟ ಗಂಡನ್ನು ಸರಿಪಡಿಸಲು ಒಳ್ಳೆಯ ಹೆಂಣು ಸಾಕು-ಕೆಟ್ಟ ಹೆಂಣನ್ನು ಸರಿಪಡಿಸಲು ಬಹು ಕೆಟ್ಟ ಗಂಡೇ ಬೇಕು. ಸಕ್ಕರೆಯನ್ನು ಮೂಸಬೇಡ, ರುಚಿ ನೋಡು - ಹೆಂಣನ್ನು ಅರ್ಥಮಾಡಿಕೊಳ್ಳಬೇಡ, ಪ್ರೀತಿಸು. ಬಾಳಿನ ಪದ್ಯ ಹೆಂಣು, ಗದ್ಯ ಗಂಡು, ಮಕ್ಕಳು ರಗಳೆ;

ಒಳ್ಳೆಯದು. ಕೆಟ್ಟದು ಎರಡೂ ದೇವನ ಕೈಗಳಂತೆ - ಯಾವ ಕೈಯಿಂದ ಹೆಣ್ಣನ್ನು ಸೃಷ್ಟಿಸಿದ ಎಂಬುದು ತಿಳಿಯಿತಲ್ಲ ? ಗಂಡು ಹೆಣ್ಣಿಗೆ ಸೂಜಿಗಲ್ಲು - ಸೂಜಿಯೂ ಅಹುದು, ಕಲ್ಲೂ ಅಹುದು ; ಬೆಕ್ಕು ಇಲಿಯನ್ನು ದ್ವೇಷಿಸುವುದಿಲ್ಲ, ಹಸಿವಿಗಾಗಿ ತಿನ್ನುತ್ತದೆ. ಇದು ದ್ವೇಷಿಸುವುದು ಇನ್ನೊಂದು ಬೆಕ್ಕನ್ನು - ಹೆಣ್ಣೂ ಅಂತೆಯೇ, ಇನ್ನೊಂದು ಹೆಣ್ಣು ಅದರ ಶತ್ರು, ಗಂಡು ಕೇವಲ ಆಹಾರ ; ಗಂಡಿನ ಹೃದಯವು ತಲೆಯಲ್ಲಿದೆ - ಹೆಣ್ಣಿನ ತಲೆ ಹೃದಯದಲ್ಲಿದೆ. ; ಹೆಣ್ಣನ್ನು ಬೈಯ್ಯುವವನು ನೂರು ಬಾರಿ ಹುಟ್ಟುತ್ತಾನೆ - ನೂರೊಂದು ಬಾರಿ ಸಾಯುತ್ತಾನೆ. ಹೆಣ್ಣು ಬಹು ಸುಂದರಿಯಾಗಿ ಕಾಣುತ್ತದೆ - ತನ್ನ ಹೆಂಡತಿಯಾಗುವವರೆಗೂ ; ಮೊಟ್ಟಮೊದಲು ಕಂಡಷ್ಟು ಚೆನ್ನಾಗಿ ಯಾವ ಹೆಣ್ಣೂ ಇರಲಾರದು. ಹೆಣ್ಣನ್ನು ಕದಿಯಬೇಡ - ಹೆಣ್ಣನ್ನು ಕೊಳ್ಳಬೇಡ ; ಹೆಣ್ಣಿನೊಂದಿಗೆ ಕಾಲ ಕಳೆಯುವವನು ಅವಳ ದೃಷ್ಟಿಯಲ್ಲಿ ಬಹು ಹಗುರವಾಗುತ್ತಾನೆ. ಕಳೆಯುವವನು ತನಗೆ ತಾನೇ ಭಾರವಾಗುತ್ತಾನೆ. ಹೆಣ್ಣಿನ ಹಿಂದೆ ಓಡುವುದರಿಂದ ಯಾವನಿಗೂ ಕೆಡುಕು ಆಗಿಲ್ಲ - ಅದನ್ನು ಹಿಡಿಯುವುದರಿಂದ ಒಳಿತೂ ಆಗಿಲ್ಲ.

**ಹೊಂದಿಕೊಳ್ಳು** ಗಂಡ, ಹೆಂಡತಿ ಪರಸ್ಪರ ಹೊಂದಿಕೊಳ್ಳಬೇಕು - ಆದರೂ ಮಧ್ಯೆ ಕೊಂಚ ಸ್ಥಳವಿರಬೇಕು ಮಗುವಿಗೆ ?



**ಕ್ಷಮೆ** ಕ್ಷಮೆ ಮಾಡದ ಮಾನವನೇ ಇಲ್ಲ ಜಗತ್ತಿನಲ್ಲಿ- ಆ ತಪ್ಪುಗಳು ಮಾತ್ರ ತನ್ನಿಂದಲೇ ಆಗಿರಬೇಕು ; ಕ್ಷಮಿಸುವುದು ದೈವತ್ವದ ಲಕ್ಷಣ - ಕ್ಷಮಿಸಿದೆನೆಂದು ಅಹಂಕಾರ ಪಡುವುದು ದೆವ್ವದ ಲಕ್ಷಣ - ಶಿಕ್ಷೆಯನ್ನು ಸಹಿಸುವುದು ಬಹು ಸುಲಭ - ಕ್ಷಮೆಯನ್ನು ಸಹಿಸುವುದು ಬಹು ಕಷ್ಟ ; ದ್ರೋಹ ಮಾಡುವ ಶತ್ರುವನ್ನು ಕ್ಷಮಿಸು - ಸ್ನೇಹಿತನನ್ನು ಶಿಕ್ಷಿಸು ; ನಿನ್ನ ಶತ್ರುವನ್ನು ಕ್ಷಮಿಸು ಎನ್ನುವ ಮಾತಿನಲ್ಲಿರುವುದು ನಿನ್ನ ಶತ್ರುವಿನ ಹಿತವಲ್ಲ - ನಿನ್ನ ಹಿತ ; ನಿನಗೆ ಕೆಡುಕು ಮಾಡಿದವನು ನಿನ್ನನ್ನು ಕ್ಷಮಿಸಲಾರ ; ದೇವನು ಎಲ್ಲರನ್ನು ಕ್ಷಮಿಸುತ್ತಾನೆ. ಅದೇ ಅವನ ಕಸುಬು.

**ಕ್ಷಯ** ಶ್ರೀಮಂತನ ಕ್ಷಯವೇ ಡಾಕ್ಟರನ ಅಕ್ಷಯ ಪಾತ್ರೆ.

**ಕ್ಷೇಮ** ಮುತ್ತು ಬೇಕೆನ್ನುವವನು ಮುಳುಗಲು ಸಿದ್ಧನಾಗಬೇಕು - ಕ್ಷೇಮ ಮಾತ್ರ ಸಾಕೆನ್ನುವವನು ದಡದ ಮೇಲೆ ಕುಳಿತರೆ ಸಾಕು ; ತಿಂಮನ ಧಾತು ತಿಳಿದರೆ ತಂಮನಿಗೂ ಕ್ಷೇಮ - ತಿಂಮನಿಗೂ ಕ್ಷೇಮ.

---

## ಗ್ರಂಥಋಣ

1. Comictionary.
2. The Pocket Book of Quotations - *Edited by Henry Davidoff.*
3. The Shorter Bartlett's Familiar Quotations.
4. 5,000 Quotations for All Occasions - *Arranged & Edited by Lawis C. Henry*
5. The Oxford Dictionary of Quotations.
6. Selected Quotations - *Modern Publishers, New Delhi.*
7. Racial Proverbs - *Champion.*
8. A Dictionary of Quotations - *Edited by Philip H. Dalbiac.*
9. Proverbs, Maxims & Phrases of All Ages Vols I & II - *Robert Christy.*
10. A Dictionary of Wisdom - *B. N. Motivala*
11. Eastern Proverbs & Emblems Illustrating Old Truths -*Rev. J. Long.*
12. The Book of English Epigrams - *W. Davenport Adams.*
13. Familiar Quotations.
14. The Sayings of Confucius.
15. Thoughts for Home Rulers.
16. Sadi - *Gulistan.*
17. The Works of Oscar Wilde.
18. The Queen Book of Quotations
19. Other Men's Minds.

ಬೀ Chi

ಯವರ

# ತಿ ಂ ಮ ನ ತ ಲೆ

ಓದಿರುವಿರಾ ?

ಈಗ

ಹನ್ನರೆಡನೆಯ ಮುದ್ರಣ

ಆಗಿ ಮುಗಿಯುತ್ತ ಇದೆ

**ಹದಿಮೂರನೆಯ ಮುದ್ರಣ**

ಆರಂಭವಾಗಲಿದೆ

**ಇದುವರೆಗೆ ಓದದೆ ಇದ್ದರೆ**

**ಕೊಂಡು ಇಡಿ**

**ನಿಧಾನವಾಗಿ - ದಿನಕ್ಕೆ ಒಂದು ಪುಟ ಅಥವಾ ಅರ್ಧ ಪುಟ ಓದಿ**

**ಮನ ಹಗುರಮಾಡಿಕೊಳ್ಳಿ**

**ನಗುತ್ತಾ - ನಗಿಸುತ್ತಾ**

ಪ್ರತಿಗಳಿಗೆ :

**ಅಂಗಡಿ ಪುಸ್ತಕದ ಎಲ್ಲ ಅಂಗಡಿಗಳಲ್ಲಿ ಕೇಳಿರಿ**

ಅಥವಾ

**ಪ್ರಕಾಶಕರಿಗೆ ಮುಂಗಡ ಹಣದ ಸಮೇತ ಬರೆಯಿರಿ**

ಬೀCHI ಯವರ

# ತಿಂಮರಸಾಯನ

ಇದರ ಪ್ರತಿಗಳು ದೊರೆಯುವಸ್ಥಳ



## ಸಮಾಜ ಪುಸ್ತಕಾಲಯ

ಶಿವಾಜಿ ಬೀದಿ - ಧಾರವಾಡ



## ನವ ಕರ್ನಾಟಕ ಪಬ್ಲಿಕೇಶನ್ಸ್

ಬೆಂಗಳೂರು ಹಾಗೂ

ಇದರ ಎಲ್ಲ ಶಾಖೆಗಳಲ್ಲಿ



## ಸಾಹಿತ್ಯ ಭಂಡಾರ

ಜಂಗಮೇಸ್ತ್ರಿಗಲ್ಲಿ, ಬಳೇ ಪೇಟೆ, ಬೆಂಗಳೂರು - ೫೬೦ ೦೫೩.



## ತಾ. ರಾ. ನಾಗರಾಜ್

೨೧. ಅನಂತ ನಿಲಯ - ೧.'ಇ' ಮೈನ್ ರಸ್ತೆ

ಬನಶಂಕರಿ ೩ನೇ ಘಟ್ಟ - ಬೆಂಗಳೂರು - ೮೫

ಮತ್ತು

## ಕರ್ನಾಟಕದ ಎಲ್ಲ ಊರುಗಳಲ್ಲಿನ

ಪ್ರಮುಖ ಪುಸ್ತಕ ವ್ಯಾಪಾರಿಗಳಲ್ಲಿಯೂ ಸಹ

